" ಓಂ ಮಹಾವಿಷ್ಣುವೆ ನಮ: "

ನಾವು ನಡ್ದ್ ಬಂದ ದಾರಿ

ಅಂದ್, ಇಂದ್, ಇನ್ ಮುಂದಕೆ

# ಕುಂಕುಮ

ಬರ್‌ದವು :

**ಪೂಜಾರೀರ ಜಿ. ಮಾದಪ್ಪ**

ಅರ್ವತೊಕ್ಲು ಗ್ರಾಮ ಮತ್ತೆ ಅಂಚೆ,

ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ.

**'KUNKUMA'** a collection of Short Stories in Arebhase language written by Poojarira Madappa, Arvathoklu Village & Post, Madikeri Taluk, Kodagu District. Published by 'Karnataka Arebhase Samskrithi Mathu Sahitya Academy'

ಬೆಲೆ : 85-00 Price Rs. : 85-00



ಪ್ರಕಟಣೆ : **2015**

ಸಲಹಾ ಸಮಿತಿ : ಶ್ರೀ ಕೊಲ್ಯದ ಗಿರೀಶ್
ಡಾ. ಪೂವಪ್ಪ ಕಣಿಯೂರು
ಡಾ. ಕೋರನ ಸರಸ್ವತಿ ಪ್ರಕಾಶ್
ಶ್ರೀ ಮೋಹನ ಸೋನ
ಶ್ರೀಮತಿ ಸಂಗೀತ ರವಿರಾಜ್

ಪ್ರಕಟಣೆ : ರಿಜಿಸ್ಟ್ರಾರ್
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.

ಪುಸ್ತಕ ದೊರೆಯುವ ಸ್ಥಳ :
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.
ಕಾಫಿ ಕೃಪ ಬಿಲ್ಡಿಂಗ್, ಮಹಾತ್ಮ ಗಾಂಧಿ ರಸ್ತೆ, ಮಡಿಕೇರಿ.
ದೂ. : 08272-223075

ಮುದ್ರಣ :
ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್, ಮಡಿಕೇರಿ.
Ph : 08272-224919, 9448135592

# ಮುನ್ನುಡಿ

ಮಡಿಕೇರಿ ತಾಲೂಕು ಬೆಟ್ಟಗೇರಿ ಗ್ರಾಮ ಪಂಚಾಯಿತಿ ಅರವತ್ತೋಕ್ಲು ಗ್ರಾಮದಲ್ಲಿ ವಾಸವಿರುವ ಶ್ರೀ ಪೂಜಾರಿರ ಜಿ. ಮಾದಪ್ಪನವು ನಂಗೆ ಸುಮಾರ್ ವರ್ಷಗಳಿಂದ ಚಿರ್‌ಪರಿಚಿತರ್. ಇವು "ಕುಂಕುಮ"ತ್ತೇಳುವ ಹೆಸರ್‌ಲಿ ಬರ್‌ದಿರುವ ವಿಚಾರಪೂರ್ಣ ಲೇಖನ ಇಂದ್‌ನ ಸಮಾಜಕ್ಕೆ ಅವಶ್ಯಕತೆ ಉಟ್ಟು. ಹಿಂದೂ ಸಂಪ್ರದಾಯಲಿ ಕುಂಕುಮಕ್ಕೆ ಪವಿತ್ರ ಇರುವಂಗೆ ಈ ಪುಸ್ತಕಕ್ಕೆ ಕುಂಕುಮಂತೇಳಿ ಹೆಸರ್‌ಕೊಟ್ಟದ್ ಅರ್ಥಪೂರ್ಣ ಆಗಿಟು.

ಈ ಸಂಕಲನ ಹೊರತಾಕೆ ಇವು ಬಹಳಷ್ಟು ಪ್ರಯತ್ನ ಪಟ್ಟಳೋ. ಭೂಮಂಡಲದಿರೊ ಪಂಚಭೂತಗಳಾದ, ವಾಯು, ಅಗ್ನಿ, ಜಲ, ಪೃಥ್ವಿ, ಆಕಾಶ ನಮ್ಮನ್ನ ಆವರಿಸಿಕಂಡಿದ್ದ್, ಅವು ಯಾವುದು ಇಲ್ಲದೆ ನಾವು ಇಲ್ಲಂತ್ತೇಳುದು ಅಷ್ಟೆ ಸತ್ಯ. ಈ ಸೃಷ್ಟಿಗೆ ಕಾರಣಕರ್ತರ್ ಯಾರ್‌ಂತ್ತೇಳಿ ನಮಿಗೆ ಸರಿಯಾಗಿ ಹೇಳಿಕೆ ಸಾಧ್ಯ ಆದುಲೆ, ಆದರೆ ಎಲ್ಲವೂ ಆ ದೇವ್ರಿಂದ ಅಂತಾ ಹೇಳುವ ಮನುಷ್ಯ ಜೀವಿಗ ಬೇರೆ ಬೇರೆ ಜಾತಿ, ಧರ್ಮ ಜನಾಂಗಗಳಾಗಿ ಬದ್‌ಕ್‌ತ್ತಿದ್ದರೂ ಎಲ್ಲರೂ ಶರಣಾದು ದೇವನೊಬ್ಬ ನಾಮ ಹಲವುತ್ತೇಳುವ ಪರಿಕಲ್ಪನೆಲಿ. ಈ ಭೂಮಿ ಮೇಲಿರುವ ಪ್ರತಿಯೊಂದು ಜೀವಿಯೂ ತಮ್ಮದೆ ಆದ ಹಾದಿಲಿ ಬದ್‌ಕ್‌ನ ಮುನ್ನಡೆಸಿಕಂಡ್ ಹೋಗ್ತಾ ಒಳೋ. ಅದನ್ನ ತಿಳ್‌ಕಂಡ್ ನಾವೂನು ಉತ್ತಮ ಜೀವನಶೈಲಿನ ರೂಪಿಸಿಕಣಕುತ್ತೇಳುವ ನಿಯಮನ ಇಟ್ಟ್‌ಕಣಕುತ್ತಾ ಶ್ರೀ ಮಾದಪ್ಪನವು ತಮ್ಮ ಲೇಖನಲಿ ಬರ್‌ದ್ ತಿಳಿಸಿಯಳೊ. ಈ ಪ್ರಪಂಚಲಿ ಬದ್‌ಕ್‌ತ್ತಿರುವ ನಾವೆಲ್ಲವೂ ಪ್ರಕೃತಿ ನಿಯಮನ ಮೀರಿ ಬಾಳಿಕಾದುಲೆ. ಕೋಟ್ಯಾಂತರ ವರ್ಷಗಳಿಂದನೂ ಈ ಭೂಮಿ ಪ್ರಕೃತಿ ಸಹಜವಾಗಿ ಏರ್‌ಪೇರು ಆದರೂ ಮನುಷ್ಯ ಮಾತ್ರ ಸಮಾಜಲಿ ಸಂಘಜೀವಿಗಳಾಗಿ ಏಕತೆನ ಕಂಡ್‌ಕಂಡ್ ಬದ್‌ಕ್‌ತ್ತೊಳೊ. ಭಾರತಲಿ ಅಂದಾಜ್ 16000 ದೇವ್ರುಗ ಒಳೋತ್ತೇಳಿ ಅವರನ್ನ ಪೂಜಿಸಿ, ನಂಬಿಕಂಡ್ ಬದ್‌ಕ್‌ತ್ತಿರುವ ಧಾರ್ಮಿಕ ನೆಲೆಯ ಜನರ ಸಂಖ್ಯೆ ಕಮ್ಮಿ ಏನಿಲ್ಲೆ. ಅಂತರದಲ್ಲಿ ಸುಮಾರ್ 21 ವಿಚಾರಗಳಿಗೆ ಸಂಬಂದಿಸಿದಂಗೆ ಮಾದಪ್ಪನವು

ಬರೆದಿರುವ ಲೇಖನಗಳಲ್ಲಿ ಅರೆಭಾಷೆ, ಪದ್ಧತಿ, ಆಚಾರ, ವಿಚಾರ, ಜೀವನ ಶೈಲಿ, ದೈವ, ದೇವರಿಗೆ ಕೊಡುದು, ಕುಟುಂಬ, ಐನ್‌ಮನೆ, ಸಾಹಿತ್ಯ, ಸಂಸ್ಕೃತಿ, ಸಂಪ್ರದಾಯ ವಿಚಾರಗಳನ್ನ ಅವಲೋಕಿಸಿ ಲೇಖನ ಬರದೊಳೋ.

ಹೆಣ್ಣ್‌ನ ಸೌಭಾಗ್ಯ ಸಂಕೇತವಾದ ಕುಂಕುಮನ ನಮ್ಮ ಪದ್ಧತಿಲಿ ಸಂಸ್ಕೃತಿಲಿ ದೇವರ ಆರಾಧನೆಗಳಲಿ ಬಹುಮುಖ್ಯವಾಗಿ ಉಪಯೋಗಿಸುತ್ತಿರುದರಂದ ಹಿಂದುಗಳಿಗೆ ಕುಂಕುಮ ಶ್ರೇಷ್ಟತೆಯ ಸಂಕೇತ ಆಗಿಟು. ಈ ಕುಂಕುಮ ಭಾಗ್ಯನ, ಹೆಣ್ಣ್ ಹುಟ್ಟಿ ಬೆಳಿತ್ತಿರ್‌ಕ್ಕನೆ ಪಡ್‌ಕಂಡ್ ಬಂದದೆ. ಆದರಿಂದ ಕುಂಕುಮ, ಕುಪ್ಪಿ ಬಳೆ, ಮೂಗುತಿ, ವಾಲೆಭಾಗ್ಯ ಅವಳ ಜೀವ ಇರುವ ತನಕ ಇರೊಕುಂತ ಮಾದಪ್ಪನವು ಈ ಲೇಖನಲಿ ತಿಳಿಸಿ, ಹೆಣ್ಣ್ ಮಗಳಾಗಿ, ಗೃಹಿಣಿಯಾಗಿ, ತಾಯಿಯಾಗಿ, ಅಜ್ಜಿಯಾಗಿ ಈ ಎಲ್ಲಾ ಭಾಗ್ಯನ ಉಳಿಸಿಕಂಡ್ ಸಂಸಾರ ಸಾಗಿಸಿಕಂಡ್ ಒಳ್ಳೆ ಸಂಪ್ರದಾಯಗಳನ್ನ ಬೆಳಿಸಿಕಂಡ್ ಹೋಗುವಲ್ಲಿ ಅವಳದೆ ಪಾತ್ರ ಮುಖ್ಯತ್ತಾ ಹೇಳಿಕಂಡ್, ಮಾದಪ್ಪನವು ವೈಚಾರಿಕತೆ ಚಿಂತನೆನ ಇಟ್ಟ್‌ಕಂಡ್ ವಿಚಾರಪೂರ್ಣ ಲೇಖನಗಳನ್ನ ಸಂಕಲನದ ಮೂಲಕ ಪ್ರಸ್ತುತಪಡಿಸಿ ಅರೆಭಾಸೆ ಸಾಹಿತ್ಯಕ್ಕೆ ವಿಶೇಷ ಕೊಡುಗೆ ಕೊಟ್ಟಳೋ. ಅರೆಭಾಸೆ ಸಾಹಿತ್ಯ ಮತ್ತೆ ಸಾಂಸ್ಕೃತಿಕ ಅಕಾಡೆಮಿಯವು ಇವರ ಲೇಖನಗಳನ್ನ ಆಯ್ಕೆ ಮಾಡಿ ಪುಸ್ತಕ ಪ್ರಕಟಿಸಕ್ಕೆ ಮುಂದಾಗಿರ್ದು ಅರೆಭಾಸೆ ಸಾಹಿತ್ಯದ ಬೆಳವಣಿಗೆಗೆ ಪೂರಕ ಆಗಿ ಉಟ್ಟು. ಮಾದಪ್ಪನವು ಸರಕಾರಿ ಚಾಕ್ರಿಂದ ನಿವೃತ್ತರಾದ ಮೇಲೆ ಅರೆಭಾಸೆ ಸಾಹಿತ್ಯದ ಬರಹದ ಕಡೆಗೆ ಇಳ್ದ್ ಸಾಹಿತ್ಯ ರಚಿಸಕ್ಕೆ ಮುಂದಾಗಿರ್ದು ಒಳ್ಳೆ ಬೆಳವಣಿಗೆಂತ ಹೇಳಕ್ಕ್. ಅವರ್ ಇನ್ನಷ್ಟ್ ಅರೆಭಾಸೆ ವಿಚಾರಧಾರೆಗಳ ಸಾಹಿತ್ಯದೆಡೆಗೆ ಹೆಜ್ಜೆ ಹಾಕಲಿಂತ್ತೇಳಿ ನಾನ್ ಹಾರೈಸ್ತಾ ಒಳೆ. ಅಣ್ಣಂದಿರ್, ಅಕ್ಕಂದರ್ ಈ ಪುಸ್ತಕನ ಓದಿ, ಅರೆಭಾಸೆ ಸಾಹಿತಿಗೆ ಪ್ರೋತ್ಸಾಹ ಕೊಟ್ಟ್ ಅರೆಭಾಸೆ ಉಳಿಸಿ, ಬೆಳೆಸಿಕ್ಕೆ ಸಹಕಾರ ಕೊಡಿತ್ತಾ ಹೇಳ್ತಾ ಮಾದಪ್ಪನವರ ಈ ಪ್ರಯತ್ನಕ್ಕೆ ಸರ್ವರೀತಿಲಿ ಯಶಸ್ಸ್ ಸಿಗಲಿತ್ತಾ ಹಾರೈಸ್ತಾ ಒಳೆ.

**ಟಿ.ಪಿ. ರಮೇಶ್**

ಅಧ್ಯಕ್ಷ, ಕೊಡಗು ಜಿಲ್ಲಾ ಕನ್ನಡ
ಸಾಹಿತ್ಯ ಪರಿಷತ್, ಮಡಿಕೇರಿ.

# ಲೇಖಕರ ಮಾತು

ನಾನ್ ಸಣ್ಣವನಾಗಿರ್‌ಕಾಕನ ನಮ್ಮ ಐನ್‌ಮನೆಲಿ ನಡಿಯುತ್ತಿದ್ದ ಕಾರ್ಯಕ್ರಮಗಳ್‌ಲಿ ಸೇರಿಕಂಬತ್ತಿದೆ. ಆಗ ನಡ್‌ಕಂಡ್ ಬರ್‌ತ್ತಿದ್ದ ಆಚಾರ ವಿಚಾರಗಳ ಬಗ್ಗೆ ಹಿರಿಯವರೊಟ್ಟಿಗೆ ಸೇರಿಕಂಡ್ ಚರ್ಚೆ ಮಾಡ್‌ತ್ತಿದ್ದೆ. ಕುಟುಂಬದ ಐನ್‌ಮನೆಲಿ ನಡಿಯುವ ಹರಿಸೇವೆ, ದೆವ್ವದೇವರಿಗೆ ಮತ್ತೆ ಚಾಮುಂಡಿಗೆ ಕೊಡ್ದು ಹಂಗೆನೆ ಮದುವೆ ಕಾರ್ಯಕ್ರಮಗಳ್ನ ಸಹ ಚರ್ಚೆಸಿತ್ತಿದ್ದೆ. ಕಾಲಕಳ್ದಂಗೆ ಹರಿಸೇವೆ ಮಾಡ್ನುದು, ದೆವ್ವ ದೇವರಿಗೆ ಕೊಡ್ದು ಚಾಮುಂಡಿಗೆ ಕೊಡ್ದು ಈ ಎಲ್ಲಾ ಕಾರುಬಾರ್‌ಗಳ್ನ ನನ್ನ ಕುಟುಂಭಸ್ತರ್‌ನ ಸೇರಿಸಿ ಕಂಡ್ ನಾನೇ ಮುಂದೆ ನಿತ್ತ್ ಮಾಡುವಂತನಾದೆ.

ಆ ಹೊತ್ತಿಗೆ ಸರಿಯಾಗಿ ನಾನ್ ಚಾಕ್ರಿಯಿಂದ ನಿವೃತ್ತಿನಾದೆ. ಅರ್ವತೋಕ್ಲು ಗ್ರಾಮದ ರಸ್ತೆಯ ಬದಿಯಲ್ಲಿ ಒಂದು ಸಣ್ಣ ಅಂಗಡಿ ಮನೆನ ನನ್ನ ಕಾಫಿ ತೋಟಲಿ ಮಾಡಿಕಂಡೆ, ಅಂಗಡಿಗೆ ಬರ್‌ತಿದ್ದ ನನ್ನ ಸ್ನೇಹಿತರ್ ಕಷ್ಟ ಸುಖ ಮಾತಾಡ್‌ತ್ತಾ, ನಮ್ಮ ಪುರಾತನದ ಬಗ್ಗೆ ದೆವ್ವ ದೇವರುಗಳ ಬಗ್ಗೆ ಮಾತಡಿಕೆ ಸುರುಮಾಡುತ್ತಿದ್ದೊ. ಇದ್ ನಂಗೆ ಈ ಕುಂಕುಮ ಪುಸ್ತಕ ಬರೆಯಕೆ ತುಂಬಾ ಸಹಕಾರಿ ಯಾತ್.

ಈ ಪುಸ್ತಕ ಬರೆಯಕೆ ಅತಿ ಹೆಚ್ಚಿಗೆ ಸಹಕಾರ ನಿಡ್ದ್ ನನ್ನ ನೆರೆಮನೆಯ ಮಿತ್ರರಾದ ಶ್ರೀಮಾನ್ ತೆನ್ನೀರ ಮಹೀನಾ (ಮೈನಾ) ಮತ್ತೆ ನನ್ನ ಕುಟುಂಭದ ಸರ್ವ ಸದಸ್ಯರ್ ಮತ್ತೆ ನನ್ನ ಧರ್ಮ ಪತ್ನಿ ಸರೋಜಿನಿ ಇದನ್ನ ಸುರ್‌ಗೆ ಬರ್ದ್ ಆದಂಗೆ ಸರಿಪಡಿಸಿ ಕೊಟ್ಟೊ. ಇದನ್ನ ಪ್ರಿಂಟ್ ಮಾಡಿಕೊಟ್ಟ ಟೀನಾ ಟೈಪಿಂಗ್ ಮಡಿಕೇರಿ, ಈ ಕುಂಕುಮತ್ತೇಳುವ ಪುಸ್ತಕಕ್ಕೆ ಮುನ್ನುಡಿ ಬರ್‌ದಂತ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀಮಾನ್ ಟಿ.ಪಿ. ರಮೇಶ್‌ನವುಕೆಲ್ಲಾ ನನ್ನ ಹೃತ್ಪೂರ್ವಕ ವಂದನೆಗಳ್ನ ಈ ಮೂಲಕ ಸಲ್ಲಿಸಿನೆ. ಇದಲ್ಲದೆ

ಈ ಲೇಖನನ ಓದಿ ಇದನ್ನ ಮುದ್ರಿಸಿ ಪ್ರಕಟಣೆ ಮಾಡಿಕೆ ಮನಪೂರ್ವಕ ಒಪ್ಪಿಗೆ ಕೊಟ್ಟ ಕರ್ನಾಟಕ ಅರೆಭಾಷೆ ಅಕಾಡೆಮಿ ಅಧ್ಯಕ್ಷರಾದ ಶ್ರೀಮಾನ್ ಕೊಲ್ಯದ ಗಿರೀಶ್‌ರವರಿಗೂ ಮತ್ತೆ ಅಕಾಡೆಮಿಯ ಸರ್ವ ಸದಸ್ಯರಿಗೂ ನನ್ನ ಹೃತ್ಪೂರ್ವಕ ವಂದನೆಗಳ್ನ ಈ ಮೂಲಕ ಸಲಿಸಿನೆ.

ಇದಲ್ಲದೆ ಈ ಕುಂಕುಮತ್ತೇಳುವ ಒಂದು ಪುಸ್ತಕನ ಸರ್ವ ಓದು ಬಾಂದವರಿಗೆ ಕುಸಿಯಾಗಿ ಕಾಂಬಂಗೆ ಮುಖಪುಟ ಮಾಡಿಕೊಟ್ಟ್ ಪುಸ್ತಕ್‌ನ ಮುದ್ರಿಸಿ ಕೊಟ್ಟ ಶ್ರೀ ಕೃಷ್ಣ ಪ್ರಿಂಟ್ರರ್ಸ್ ಮಾಲೀಕರಾದ ಶ್ರೀ ಉನ್ನಿಕೃಷ್ಣನ್ ಮತ್ತೆ ಸಿಬ್ಬಂದಿಯವರಿಗೆ ನನ್ನ ಹೃತ್ಪೂರ್ವಕ ವಂದನೆ ಸಲ್ಲಿಸುತ್ತಾ. ಈ ಎಲ್ಲಾವೂಕು ನಮ್ಮ ಕುಲದೇವರಾದ ಶ್ರೀ ವೆಂಕಟರಮಣ ಸ್ವಾಮಿಯ ಅನುಗ್ರಹ ಇರಲಿತ್ತೇಳಿ ನಾನ್ ದೇವರ್‌ನ ಬೇಡಿಕಂಡನೆ.

ಪೂಜಾರಿರ ಜಿ. ಮಾದಪ್ಪ

# ಲೇಖನದ ಉದ್ದೇಶ

ನಾವೆಲ್ಲ ಒಂದುತ್ತೇಳುವ ಭಾವನೆ ಪ್ರತಿಯೊಬ್ಬ ಮನುಷ್ಯರ ಆತ್ಮಲಿ ಹುಟ್ಟಿ ಬರಕುತ್ತೇಳುವ ಉದ್ದೇಶ ನನ್ನ ಗುರಿಯಾಗಿಟ್ ಕಂಡ್ ಅದಲ್ಲದೆ ನನ್ನ ಅವ್ವನ ಭಾಷೆ ಅರೆಭಾಷೆನ ಬೆಳ್ಸ್‌ಕುತ್ತೇಳಿ ಈ ಲೇಖನ ಬರ್ದ್‌ದ್.

ಪುರಾಣದ ಬಗ್ಗೆ ಓದ್‌ಕಾಕನ ಅನಾದಿ ಕಾಲಂದ ಒಳಜಗಳ, ಅಣ್ಣ ತಮ್ಮಂದರೊಳಗೆ ಆಸ್ತಿಗಾಗಿ ಮತ್ತೆ ಹೆಣ್ಣಿಗಾಗಿ ಹೊಡೆದಾಟ, ಹೆಣ್ಣ್‌ನ ಒಂದು ಕೀಳ್ ಮಟ್ಟಕ್ಕೆ ಇಳ್ಸ್‌ಸಿ ಹೆಂಣ್‌ನ ಬಗ್ಗೆ ಅಪಪ್ರಚಾರ ಮಾಡ್ದು ಅಲ್ಲದೆ ಒಂದು ಹೆಣ್ಣ್‌ನ ಕೂರೂಪಿ ಮಾಡ್ದು ಆ ಹೆಣ್ಣ್ ಯಾವುದೇ ಸುಭ ಕಾರ್ಯಗಳಲ್ಲಿ ಎಲ್ಲಾ ಹೆಣ್ಣ್ ಮಕ್ಕಳಂಗೆ ಓಡಾಡಿಕೆ ಬೊತ್ತ್‌ತ್ತೇಳುವ ನಿರ್ಭಂದನೆ ರೂಪಿಸಿಕಂಡ್ ಅದ್‌ಕ್ಕೆ ತಕ್ಕಂಗೆ ಸಹಾಕಾರ ಕೊಡುತ್ತಿದ್ದ ಒಂದು ಗುರುಕುಲ ವರ್ಗದವು ಇದ್ದೋತ್ತೇಳಿ ನನ್ನ ಮನಸ್ಸಿಗೆ ಬ್ಯಾನೆ ಆಗುತುಟ್ಟು. ಆ ಕೆಟ್ಟ ಪದ್ದತಿನ ನಾವೆಲ್ಲಾ ಸೇರಿ ಕೈ ಬಿಡುವಂಗೆ ಮಾಡಕು. ಪ್ರತಿಯೊಬ್ಬ ಹೆಣ್ಣಿಗೆ ಸಮಾಜಲಿ ಸರಿ ಸಮಾನಾದ ಹಕ್ಕು ಸಿಕ್ಕಕುತ್ತೇಳಿ ಕುಂಕುಮತ್ತೆಳಿ ಹೆಸರ್‌ಕೊಟ್ಟ್ ಬರ್ದ್‌ದ ಈ ಲೇಖನ. ಇದರ್‌ಲಿ ಹೆಣ್ಣಿಗೆ ಕುಂಕುಮ ಭಾಗ್ಯ, ಕುಪ್ಪಿ ಬಳೆ ಸದಾ ಹಾಕಂಬಂತ ಅವಕಾಶ ಕೊಡೊಕು. ಇದ್‌ಕ್ಕಾಗಿ ಸರ್ವ ಹೆಣ್ಣ್ ಕುಲಭಾಂದವು ಉತ್ತಮಮಟ್ಟಲಿ ಹೋರಾಟ ಮಾಡಿ ಕಾರ್ಯರೂಪಕ್ಕೆ ತರೊಕುತ್ತೇಳುವ ನನ್ನ ಉದ್ದೇಶ. ಅಲ್ಲದೆ ಆಯುರ್ವೇದದ ಬಗ್ಗೆ ಬರ್‌ದದ್ ನಮಿಗೆ ಅತಿ ಸುಲಬಲಿ ಸಿಕ್ಕುವ ಮದ್ದ್ ಪ್ರಕೃತಿ ಗಿಡ ಮೂಲಗಳ್‌ಂದ ಅಂದರೆ ಪ್ರಕೃತಿ ಉಳಿಸಿದಂಗಾತ್, ಸುಲಭಲಿ ಮದ್ದ್ ಸಿಕ್ಕಿದಂಗಾತ್‌ತ್ತೇಳುವ ಗುರಿ ನನ್ನದ್. ಮತ್ತೆ ಜೀವನ ಶೈಲಿ ನಾವ್ ನಾವಾಗಿಯೆ ನಮ್ಮನ್ನ ತಿದ್ದಿ ಕೊಂಡರೆ ಅದಿಕ್ಕಿಂತ ಒಳ್ಳೆಯದಾದ ಜೀವನತ್ತೇಳ್‌ದು ಮತ್ತೊಂದು ಇಲ್ಲೆತ್ತೇಳುವ ಅಭಿಪ್ರಾಯ ನನ್ನದ್ ಅದ್‌ಕ್ಕಾಗಿ ಆಚಾರ-ವಿಚಾರಗಳ ಬಗ್ಗೆ ಬರ್ದ್‌ಳೆ. ದೆವ್ವ ದೇವರುಗಳಿಗೆ ಪೂಜೆ ಪುರಸ್ಕಾರಗಳ್ನ್ ಮಾಡ್‌ವ ಬಗ್ಗೆ. ನಾವೆಲ್ಲಾ ಅನಾಧಿಕಾಲಲಿ ಒಂದೆತ್ತೇಳುವ ಭಾವನೆ ನನ್ನ ದಾದ ಮ್ಯಾಲೆ ಅನಾದಿಕಾಲಂದ ಪೂಜಿಸಿಕಂಡ್ ಬರ್‌ವ ಪೂಜಾಕ್ರಮ ಒಂದೆ ತರಲಿ ಇರೊಕು. ಈಗ ಊರಿಗೊಂದು ಮನೆ ಮನೆಗಳಲ್ಲಿ ಒಂದೊಂದು ಪದ್ಧತಿ ಯಾಗಿಟ್ಟು ಅದನೆಲ್ಲಾ ಸರಿಪಡಿಸಿ ಕರ್ನಾಟಕ ಅರೆಭಾಷೆ ಅಕಾಡೆಮಿಯು ಎಲ್ಲಾ ಗೌಡರ ಪದ್ಧತಿಗಳ್ನ್ ಒಂದೆ ರೀತಿ ಮಾಡೊಕು. ಆಗ ಮಾತ್ರ ನಾವೆಲ್ಲಾ ಒಂದೆತ್ತೇಳ್ದು ಎಲ್ಲಾ ಗೌಡ ಭಾಂದವರಲ್ಲಿ ಬಂದದೆತ್ತೇಳುವ ಅಭಿಪ್ರಾಯಂದ ಈ ಮಸ್ತಕ ಬರ್‌ದದ್.

# ಅಧ್ಯಕ್ಷರ ಮಾತ್

ಅರೆಭಾಷಿಕರ ಬಾಳ ದಿನದ ಕನಸ್ ಆಗಿದ್ದ ಅಕಾಡೆಮಿ ಆಕ್ರಿಗೂ ಕರ್ನಾಟಕ ಘನ ಸರಕಾರ ಮಾನ್ಯತೆ ಮಾಡಿ ಅರೆಭಾಷೆ ಸಂಸ್ಕೃತಿ ಸಾಹಿತ್ಯ ಅಕಾಡೆಮಿನ ಸ್ಥಾಪನೆ ಮಾಡಿಯೊಳೊ.

ಅರೆಬಾಸೆ ಸಂಸ್ಕೃತಿ ಸಾಹಿತ್ಯ ಜಾನಪದನ ಉಳ್ಸಿ ಬೆಳ್ಸಿಕೆ ಸರಕಾರ ಸಮಿತಿ ರಚನೆ ಮಾಡಿಯೊಳೊ. ಅರೆಬಾಸೆಲಿ ಪುಸ್ತಕ ಬಾಳ ಕಮ್ಮಿಯಿದ್ದ್ ಅಕಾಡೆಮಿ ಅರೆಬಾಸೆ ಪುಸ್ತಕ ಪ್ರಕಟಣೆಗೆ ಆದ್ಯತೆ ಕೊಟ್ಟದೆ. ಈ ಒಂದ್ ಅವಕಾಸನ ಬಳಸಿಕಂಡ್ ಲೇಖಕರ್ ಅರೆಬಾಸೆಲಿ ಕಥೆ, ಕವನ, ಅನುವಾದ ಕತೆಗ, ಸಂಸ್ಕೃತಿಗೆ ಸಂಬಂದಪಟ್ಟ ಲೇಖನಗಳ್ನ ಬರೆಯೂಕೂತ ಮನವಿ ಮಾಡ್ತಾವೊಳೆ.

ಸುರೂಲಿ ಐದ್ ಪುಸ್ತಕಗಳ್ನ ಪ್ರಕಟಣೆ ಮಾಡಿಕೆ ನಮ್ಮ ಸಮಿತಿ ತೀರ್ಮಾನ ಮಾಡಿಯೊಳೊ, ಪುಸ್ತಕ ಬರ್ದ ಎಲ್ಲಾ ಲೇಖಕರಿಗೂ ನನ್ನ ಹೃತ್ಪೂರ್ವಕ ಅಭಿನಂದನೆನ ತಿಳ್‌ಸ್ತಾವೊಳೆ. ಬರ್ದ ಎಲ್ಲಾ ಪುಸ್ತಕ ಶ್ರೇಷ್ಠ ಅಂತ ನಾನ್ ಹೇಳ್ದೂಲೆ. ಲೇಖಕರ್ ಅವರ ಸೃಜನಶೀಲತೆನ ಈ ಲೇಖನಲಿ ತೋರ್‍ಸೊಳೊ. ಹಂಗೆ ಎಲ್ಲಾ ಪ್ರಕಾರಗಳ್ಲಿ ಅವರ ಸಾಮರ್ಥ್ಯನ ಓರಗೆ ಹಚ್ಚಿಯೊಳೊ.

ಈ ನಿಟ್ಟ್‌ಲಿ ಹಿರಿಯವು ಮತ್ತೆ ನನ್ನ ಸಂಬಂಧಿಕರ್ ಆದ ಪೂಜಾರೀರ ಜಿ. ಮಾದಪ್ಪನವು ಪರ್ವ, ಮಹಾಭಾರತ, ಭಗವದ್ಗೀತೆ, ರಾಮಾಯಣ ಹಂಗೆ ಕುಟುಂಬಲಿ ನಡ್ಸಿಕಂಡ್ ಬರ್‌ವ ಆಚಾರ ವಿಚಾರನ ಪಾಲಿಸ್ಕಂಡ್ ತಿಳ್ಕಂಡ್ '**ಕುಂಕುಮ**'ತೇಳ್ವ ಪುಸ್ತಕನ ಬರ್ದೊಳೊ. ಈ ಪುಸ್ತಕ ನಮ್ಮ ಜನಕೆ ಸಂಸ್ಕೃತಿ, ಆಚಾರ-ವಿಚಾರಗಳ್ನ ಪಾಲಿಸಿಕಂಡ್ ಹೋಕೆ ಖಂಡಿತಾ ಸಹಾಯ ಆದೆಂತ ನನ್ನ ಭಾವನೆ. ಹಂಗೆ ಮುದ್ರಣ ಕಾರ್ಯಕ್ಕೆ ಸಹಾಯ ಮಾಡ್ದ ಶ್ರೀಮತಿ ಸಂಗೀತಾ ರವಿರಾಜ್‌ನವ್ಕ ಮತ್ತೆ ಪುಸ್ತಕ ಸಮಿತಿಯವ್ಕ ಅಕಾಡೆಮಿ ಸದಸ್ಯರಿಗೂ ನನ್ನ ಪ್ರೀತಿಯ ಕೃತಜ್ಞತೆನ ಸಲ್ಲಿಸ್ತಾವೊಳೆ.

**ಕೊಲ್ಯದ ಗಿರೀಶ್**
ಅಧ್ಯಕ್ಷರ್

# ಒಳ ಪುಟಲಿ

# ದೇವರು

ದೇವರುಂತೇಳ್ದು ಒಂದು ಶಕ್ತಿ, ಇದ್ ಕಣ್ಣ್‌ಗೆ ಕಾಂಬಲೆ ಅಥವಾ ಕಣ್ಣ್‌ಗೆ ಕಂಡದೆ. ಇದನ್ನ ಸಾಭೀತುಪಡ್ಸಿಕೆ ಆದುಲೇ. ಆದರೆ ನಾವು ತಿಳ್‌ಕಣ್‌ಕಾದ್ ಇಷ್ಟೆ ಅನಾದಿ ಕಾಲಂದ ಹೇಳಿಕಂಡ್ ಬರ್ತಿದ್ದು, ಇದು ಒಂದು ಗಾಳಿತೇಳ್ದು.

## ಗಾಳಿ:

ಈ ಗಾಳಿತೇಳ್ದು ಪ್ರತಿಯೊಂದು ಜೀವಿಗೂ ಬೇಕು. ಅದನ್ನ ನಾವೆಲ್ಲಾ ಸೇರಿ ಗಾಳಿತಾ ಕರ್‌ದವೆ. ಬ್ಯಾರೆ ಬ್ಯಾರೆ ಭಾಷೆಲಿ ಅವರವರ ಭಾಷೆಗೆ ತಕ್ಕಂಗೆ ಕರ್ದವೆ. ಅಂದರೆ ಇದ್ ಎಲ್ಲವುಕ್ಕೊ ಬೇಕು, ಕಣ್ಣಿಗೆ ಮಾತ್ರ ಕಾಂಬಲೆ. ಆದರೆ ಈ ಕಣ್ಣ್‌ಗೆ ಕಾಣದ ಒಂದು ವಿಚಿತ್ರವಾದ ಶಕ್ತಿಗೆ ನಾವು ಗಾಳಿತ್ತೇಳಿ ಹೆಸರ್ ಕೊಟ್ಟೆಳೋ. ಇದ್ ಎಲ್ಲವೂ ನಂಬುವ ವಿಚಾರ.

ಹಂಗೆನೆ ನಾವೆಲ್ಲ ಸೇರಿ ಅವರವರ ಭಾಷೆಗೆ ಸಂಬಂಧಿಸಿದಂಗೆ ಕಣ್ಣಿಗೆ ಕಾಣದ ಒಂದು ಶಕ್ತಿಗೆ ದೇವರುಂತೇಳಿ ಹೆಸರು ಕೊಟ್ಟೋಳೊ. ಇದ್ ಸಹ ಎಲ್ಲರೂ ನಂಬುವಂತದ್ದೆ

ಅಂದರೆ ಕಣ್ಣ್‌ಗೆ ಕಾಣದಂತಹ ಅಂದರೆ ಆತ್ಮಕ್ಕೆ ಸದಾ ಕಾಂಬಂತಹ ಒಂದು ಶಕ್ತಿಯೇ ಗಾಳಿ. ಆ ಗಾಳಿಯೇ ದೇವರು. ಇದ್ ಪ್ರತಿಯೊಂದು ಜೀವಿಗಳಲ್ಲಿ ಅಡಗಿರುವ ಶಕ್ತಿ ಇದನ್ನ ಈಗಿನ ವಿಜ್ಞಾನ ಯುಗಲಿ ಮೂಡನಂಬಿಕೆಂತ್ತೇಳಿ ಬಹಳಷ್ಟು ಹಗುರವಾಗಿ ಜನ ಮಾತಾಡುವೆ.

ನೋಡಿ ನನ್ನದೊಂದು ಅನಿಸಿಕೆ ಮನುಷ್ಯ, ಪ್ರಾಣಿ ಯಾರೇ ಆಗಲಿ ಅವುಕೆ ಬ್ಯಾನೆ ಆಕಾಕನ ಅವು ಮರ್ದುದು ಹೆಂಗೆತ್ತೇಳಿರೆ, ಆ, ಆೀ ಆೀೀ ತ್ತೇಳಿ.

ಇದ್ ನಿಮಿಗೆಲ್ಲಾ ತಿಳ್ದ ವಿಚಾರ. ಈ ಆ, ಆೀ ಆೀೀ ತ್ತೇಳ್ದ ವಿಚಾರ. ಈ ಸದ್ (ಆ, ಆೀ ಆೀೀ ತ್ತೇಳ್ವ ಶಬ್ದ) ಕೇಳ್ ಕಾಕನ ಇದ್ ಬಾಕಿದ್ದವರ ಮನಸ್ಸಿಗೆ ಸೀದ ತಗ್‌ಲ್‌ದೆ. ಆಗ ಅವು ಗ್ಯಾನ ಮಾಡುವೆ ಏನೋ ಒಂದು ತೊಂದರೆ ಆಗುಟ್ಟುತ್ತೇಳಿ ಅಥವಾ ಆಗುತ್ತಾಟ್ಟುತ್ತೇಳಿ. ಈ ಸುದ್ದಿನ ತಕಂಡ್ ಬಾದು ಗಾಳಿ, ಅದ್ ಸೇರ್ದು ನಮ್ಮ ಆತ್ಮಕ್ಕೆ ಅಲ್ಲಿಂದ ಕ್ರಮ ತೆಗ್ದಕೊಂಬುದು ಆ ವ್ಯಕ್ತಿ ಅಥವಾ ಆ ಜೀವಿ ಇದೆಲ್ಲಾ ಒಂದಕೊಂದು ಹೊಂದಿಕೊಂಡ ಸಂಬಂದಗ. ಅದರ್‌ಂದ ನೀವು ನಾವು ಯಾರ್ ಈ ಶಕ್ತಿಗಳ ಮೂಲ ಹುಡಿಕಿಕೆ ಹೋಕಾಗದ್, ಹುಡಿಕಿರೆ ಖಂಡಿತಾ ಕಾರಣ ನಮ್ಮಲ್ಲಿರುವ ಶಕ್ತಿಯೆ ಕುರುಡು. ಆದರೆ ಈ ಶಕ್ತಿ ನಿಜವಾದ ಭಕ್ತರಿಗೆ ಮಾತ್ರ ಖಂಡಿತಾ ಕಾಣುಂತುಟ್ಟು.. ದೇವರು ಪ್ರತಿಯೊಬ್ಬ ಜೀವಿಗೆ ದೊಡ್ಡದಾಗಿ ಕೊಟ್ಟ ವರತ್ತೇಳ್ರೆ ಮರೆವು. (ಮರ್‌ತ್ತುಬುಡ್ದು) ಪ್ರತಿಯೊಂದು ಗ್ಯಾನ ಇದ್ದಿದ್ರೆ ಏನ್ ಆಗ್‌ತಿತ್ ನೀವೆ ಗ್ಯಾನ ಮಾಡ್ಕಣಿ.

ಈಗ ಈ ಬರವಣಿಗೆನ ಅರೆ ಭಾಷೆಲಿ ಯಾಕೆ ಬರ್‌ದದ್‌ತ್ತೇಳ್‌ದೊಂದು ಪ್ರಶ್ನೆ?.

ಅಂದರೆ ಆ, ಆೀ ಆೀತ್ತೇಳ್ದು ಒಂದು ಸೂಚನೆ – ಅಮ್ಮ,

ಅಮ್ಮಾ, ಅಮ್ಮಾಂತೇಳ್ದು ಒಂದು ಕೂಸು ಅವ್ವನ ಕರೆಯೋದು ಅಂದರೆ ಆ, ಆಽ ಆಽತ್ತೇಳ್ದು ದೇವರಿಗೆ ಕೇಳ್ದೆ. ಅಮ್ಮ, ಅಮ್ಮಾ, ಅವ್ವ, ಅವ್ವಾತ್ತೇಳ್ದು ಕೂಸುನ ಅಮ್ಮ ಅಥವಾ ಅವ್ವಂಗೆ ಕೇಳ್ದೆ. ಮತ್ತೆ ಅಮ್ಮ ಅಥವಾ ಅವ್ವನ ಮಾತ್‌ನಂಗೆ ಬೆಳವಣಿಗೆ.

ಹಂಗೆನೆ ನನ್ನ ಅವ್ವನ ಭಾಷೆ ನಂಗೆ ದಾರಿದೀಪ. ನಾನ್ ಸುರ್‌ಗೆ ಕಲ್ತದ್ ಅರೆಭಾಷೆ. ಈ ಅರೆಭಾಷೆನ ಕೈಬಿಡಕಾಗದ್‌ತ್ತೇಳಿ ಇದನ್ನ ಬೆಳ್ಸಕುತ್ತೇಳಿ ನಾನ್ ಅರೆಭಾಷೆಲಿ ಬರ್‌ದದ್.

# ಪುರಾಣದ ಬಗ್ಗೆ:

**ಮಹಾಭಾರತದ ಬಗ್ಗೆ :** ಹಂಗೆನೆ ನಮ್ಮ ಪುರಾಣದ ಮಹಾಭಾರತದ ಬಗ್ಗೆ ಸ್ವಲ್ಪ ಗಮನ ಹರ್‌ಸೊಕ್.

ಮಹಾಭಾರತ ಪುಸ್ತಕನ ಓದ್‌ಕಾಕನ ಮಹಾಭಾರತ ನಡ್ದದ್ ನಿಜತ್ತೇಳಿ ಆದೆ. ಹಂಗೆನೆ ಮಹಾಭಾರತ ಸಣ್ಣ ಸಣ್ಣ ಕಥೆಗ. ಹಂಗೆನೆ ಶಾಲೆಯ ಪಠ್ಯಪುಸ್ತಕಗಳನ್ನ ಓದ್‌ಕಾಕನ ತುಂಬಾ ಬೇಜಾರ್ ಆದೆ. ಯಾಕೆತ್ತೇಳ್ರೆ ಪಾಂಡವು ಮತ್ತು ಕೌರವು ಸ್ವಂತ ಅಣ್ಣ-ತಮ್ಮಂದಿರ ಮಕ್ಕ. ಇವ್ ರಾಜ್ಯ ಅಧಿಕಾರಕ್ಕಾಗಿ ಹೊಡ್ದಾಡ್‌ಕಂಡದ್ ಹೊರ್‌ತ್ ಪ್ರಜೆಗಳ ಹಿತಕ್ಕಾಗಿ ಅಥವಾ ಜೀವಿಗಳ ರಕ್ಷಣೆಗಾಗಿ ಅಲ್ಲತ್ತೇಳ್ದು ಮನಸ್ಸಿಗೆ ಬರುತುಟ್ಟು. ಇದ್ ಅಂದ್ ನೆಡ್ದ ವಿಷಯ. ಅಥವಾ ಕಥೆಗಾರನ ಮೇಧಾವಿತನ ಅಥವಾ ಬುದ್ದಿವಂತಿಕೆತ್ತೇಳ್ದು ನನ್ನ ಮನಸ್ಸಿಗಾಗುತುಟ್ಟು. ಅಂದರೆ ರವಿ (ಸೂರ್ಯ) ಕಾಣದನ್ನ ಕವಿ ಕಂಡದೆ. ಕವಿ ಕಾಣದನ್ನ ಶಿಲ್ಪಿ ಕಂಡದೆ. ಈಗ ನಾವ್ ವಿಷಯಕ್ಕೆ ಬರೊನೊ. ಅಂದರೆ ಅಂದ್, ಇಂದ್, ಇನ್ ಮುಂದೆ.

**ಅಂದ್:** ಅಂದ್ ರಾಜರ ಕಾಲ, ಅರಸರ ಕಾಲ ಅಥವಾ

ಚಕ್ರವರ್ತಿಗಳ ಕಾಲ ಅವು ಹೇಳ್ದಂಗೆ ಕೇಳಕು, ಅವು ಹೇಳ್ದಂಗೆ ಬರೆಯಕು ಅವು ಹೇಳ್ದಂಗೆ ನಡಕೊಣಕು.

**ಇಂದ್ :** ಇಂದ್ ಪ್ರಜಾಪ್ರಭುತ್ವದ ಕಾಲ, ರಾಷ್ಟ್ರಪತಿ, ಪ್ರದಾನ ಮಂತ್ರಿ ಮತ್ತೆ ರಾಜ್ಯಗಳ ಮುಖ್ಯ ಮಂತ್ರಿಗಳ ಕಾಲ ಅಂದರೆ ಸಂವಿಧಾನದ ಆಧಾರದ ಮ್ಯಾಲೆ ಆಳುತ್ತಿರುವ ಕಾಲ.

**ಇನ್ನ್ ಮುಂದೆ :** ಇನ್ನ್ ಮುಂದೆ ಅನಾವಶ್ಯಕ ಕಾರಣಗಳಿಗಾಗಿ ಹೊಡೆದಾಟ, ರಾಜಕೀಯದಲ್ಲಿ ಹೊಡೆದಾಟ, ಊರು ಊರುಗಳಲ್ಲಿ ಹೊಡೆದಾಟ, ಮೋಸ, ವಂಚನೆ, ವ್ಯಭಿಚಾರಗಳ ಕಾಲ, ಅದೆಲ್ಲಕ್ಕಿಂತ ಹೆಚ್ಚಾಗಿ ದೇವರ ಶಕ್ತಿ ಅಥವಾ ಮಹಿಮೆಗಳ್ನ ಸುಳ್ಳುತ್ತೇಳಿ ವಾದ ಮಾಡುವ ಕಾಲ ಬಂದದೆ ಇದೇ ವಿನಾಸದ ಕಾಲ.

# ಆಚಾರ ವಿಚಾರ

**ಅಂದ್ :**

ಅಂದ್ ಕಣ್ಣಿಗೆ ಕಾಂಬಂತ ಋಷಿಮುನಿಗ, ಗುರುಗ, ಅಪ್ಪ, ಅಮ್ಮ ಮತ್ತೆ ಹಿರಿಯವು. ಒಂದು ವಿಷಯಕ್ಕೆ ಅಥವಾ ಪ್ರತಿಯೊಂದು ವಿಷಯಕ್ಕೆ ಸಂಬಂದ ಪಟ್ಟಂಗೆ ಒಂದು ನಿಯುವುಗಳ್ನ ರೂಪಿಸಿಕಂಡ್ ಅದಕ್ಕೆ ತಕ್ಕಂಗೆ ನಡೆಸಿಕೊಂಡ್ ಬರುತ್ತಿದ್ದಳೊ ಇದೆ ಆಚಾರ. ಇದನ್ನ ಸಂಸ್ಕೃತಿ ಅಥವಾ ಪದ್ದತಿತಾ ಹೇಳುವೆ, ಅಥವಾ ನಡ್‌ಪು ತಾ ಹೇಳಕ್. ಇದ್‌ಕೆ ಸಂಬಂಧ ಪಟ್ಟಂಗೆ ಲಿಖಿತ ಆಧಾರಗಳಿಲ್ಲೆ. ಕಾರಣ ಅಂದ್ ಓದಿಕೆಬಾರದವು ಜಾಸ್ತಿ ಇದ್ದೊ. ಅದ್‌ಕ್ಕಿಂತ ಹೆಚ್ಚಾಗಿ ಹೇಳ್ಬಾದರೆ ಓದು ಬರಹ ಅಕ್ಷರತ್ತೇಳ್ದನ್ನ ಕಂಡ್ ಹಿಡಿಯಕ್ಕಿಂತ ಪುರಾತನದ್. ಇದಕ್ಕೆ ಸಂಬಂಧ ಪಟ್ಟಂಗೆ ಕೆಲವು ಉದಾಹರಣೆಗಳ್ನ ನಾವು ಆಯ್ಕೆ ಮಾಡಿಕಣಕ್.

* * * * *

# ಆರ್ಯುರ್ವೇದದ ಬಗ್ಗೆ

**ಆರ್ಯುರ್ವೇದಕೆ ಸಂಬಂಧಿಸಿದ ಮದ್ದ್ ಗಿಡಗ ಅಥವ ಗಿಡಮೂಲಿಕೆ :**

1. ಈಗ ಸಾಮಾನ್ಯ ಕಾಂಬಂತ ಶೀತ, ಕೆಮ್ಮುಲು, ಜ್ವರ ಇದ್‌ಕ್ಕೆ ತುಂಬೆರಸಕ್ಕೆ ಜೇನ್ ಸೇರಿಸಿ ಕುಡಿಯದು ಅಥವಾ ತುಳಸಿ ರಸಕ್ಕೆ ಜೇನ್ ಸೇರಿಸಿ ಕುಡಿಯದು.

2. ಗಜ್ಜಿಗೆ ಕೊಡಿ (ಚಿಟ್ಟೆಗೋಲಿ) ರಸಕ್ಕೆ ಓಮಕ್ಕಿ, ಒಳ್ಳೆ ಮೆಣಸು, ಬೆಳ್ಳುಳ್ಳಿ ಸೇರಿಸಿ ಒಂದೊಂದು ಚಿಪ್ಪಿ (ಒಂದು ಗ್ಲಾಸ್) ಕುಡ್ಸ್‌ತಿದ್ದೊ, ಈ ಕಾಯ್ಲೆಗ ಹೇಳದೆ ಕೇಳದೆ ಓಡಿ ಹೋಗ್‌ತ್ತಿತ್ತ್. ಅಂದರೆ ಪೂರ್ತಿಯಾಗಿ ವಾಸಿ ಆಗ್‌ತ್ತಿತ್ತ್.

ಆದರೆ ಇದಕ್ಕೆ ಸಂಬಂಧ ಪಟ್ಟಂಗೆ ಒಂದ್ ಕಟ್ಟ್‌ಪಾಡ್ ಮಾಡಿಕಂಡ್ ಇದ್ದೊ. ಈ ಮದ್ದ್ ಜನರ್‌ಗೆ ಗೊತ್ತಿದ್ದರೂ ಸಹ ಅದನ್ನ ಕೊಡುವ ಅಧಿಕಾರ ಆ ಊರ್‌ನ ತಾಯಪ್ಪ ಅಥವಾ ತಾಯವ್ವ ಅಂದರೆ ಚಾಂಪ, ಚಾಮೆವ್ವ ಅವ್ವತ್ತೇಳಿ ಇವ್ರನ್ನ ಕರ್‌ದವೆ. ಇವುಕ್ಕೆ ಮಾತ್ರ ಇದ್ದದ್. ಇದ್ ಅಂದ್‌ನ ನಡ್‌ಪು. ಅದ್‌ನ ಇಂದಿಗೂ ಸಹ ನಡೆಸಿಕೊಂಡ್ ಬರ್‌ತೊಳೊ. ಚಾಂಪ, ಚಾಮೆವ್ವ

(ಅಂದರೆ ಅಜ್ಜ ಅಥವಾ ಅಜ್ಜಿ) ಕೊಡುವಂತ ಮದ್ದ್‌ನ ಹೆಸರು ಹೇಳಕಾಗದ್ ಒಂದು ವೇಳೆ ಹೇಳ್ರೆ ಆ ಮದ್ದ್‌ಗೆ ಫಲ ಇಲ್ಲೆತ್ತೇಳ್ದ್ ಇದ್ ನಡ್‌ಪು.

**ಇಂದ್ :**

ಇಂದ್ ಆ ಮದ್ದ್ ಗಿಡಗ ಕಾಂಬಕ್ಕೆ ಸಿಕ್ಕುಲ್ಲೆ. ಅಂದರೆ ಬಹಳಷ್ಟ್ ಕಡಿಮೆ ಆಗ್ತಾ ಬರ್ತುಟ್ಟು. ಕಾರಣ ಜನರ ಜೀವನಕ್ಕೆ ಆಧಾರವಾಗಿರುವ ಬೆಳೆಗಳ್ನ ಬೆಳ್ಸುವುದರಿಂದ ಇದರೊಟ್ಟಿಗೆ ಜನ ವಿದ್ಯಾವಂತರಾಗುತ್ತಾ ಬರುತ್ತೋಳೊ. (ಇದ್ ಹೆಮ್ಮೆ ಪಡುವ ವಿಚಾರ) ಈ ಮದ್ದ್ ಗಿಡಗಳನ್ನ ಕಂಡರು ಸಹ ಅವುಕೆ ಅದನ್ನ ತಿಳ್ಕೋಣೊಕುಂತ್ತೇಳುವ ಆ ಶಕ್ತಿ ಇಲ್ಲೆ. ವಿಷಯನ ಅಲ್ಲಿಗೆ ಬಿಟ್ಟರೆ ಪರವಾಗಿಲ್ಲೆ. ಆದರೆ ಅವರ ಅಭಿಪ್ರಾಯ ಏನ್ ಗೊತ್ತಾ? ಇದೆಲ್ಲಾ ಕಾಡ್ ಗಿಡಗ ಇದನ್ನೆಲ್ಲಾ ಕಡ್ದ್ ಹಾಕಿತ್ತೇಳುವ ಒಂದು ಭಾಗದವು. ಇನ್ನೊಂದು ಭಾಗದವು ಹೇಳ್ದ್ ಏನ್ ಗೋತ್ತಾ? ಕಾಡ್ ಕಡಿಯೋಕೆ ತುಂಬಾ ಹಣ ಖರ್ಚಾದೆ. ಕೆಮಿಕಲ್ಸ್ ಕರಾಟೆ ಸ್ಪ್ರೇ ಮಾಡಿ ಮುಂದೆ ಈ ಕಾಡ್ ಗಿಡಗ ಹುಟ್ಟುದುಲ್ಲೆ. ಆಗ ತೋಟದ ಕೆಲಸಕ್ಕೆ ಜನ ಕಮ್ಮಿ ಸಾಕ್ ಸಂಬಳ ಕೊಡುವ ದುಡ್ಡ್ ಉಳ್ದದೆ. ಇದ್ ಅವರವರ ಭಾವನೆಗೆ ಸರಿತ್ತೇಳಕ್.

ಆದರೆ ಈ ಗಿಡಗ ಮುಂದೆ ಹುಟ್ಟುದ್ಲೆ. ದನ ಮತ್ತು ಕಾಡು ಪ್ರಾಣಿಗಳಿಗೆ ಮೇವು ಇಲ್ಲೆ. ಮನುಷ್ಯಂಗೆ ಸಹ ಬೇಕಾದ ಪ್ರಕೃತಿ ನಿಯಮದ ಗಿಡಗಳಾದ ಅಂದರೆ ಯಾರು ನೆಡದೆ, ಬೆಳೆಸದೆ ತನ್ನಿಂದ ತಾನೇ ಬೆಳೆಯುವ ಗಿಡಗಳಾದ ಚರ್ಮೆ ಸೊಪ್ಪು, ಗಿಣಿಕೆ ಸೊಪ್ಪು, ಚಗತೆ ಸೊಪ್ಪು, ಕಾಡ್ ಕೆಸ, ಕರಿ ಕೆಸ, ಮರ ಕೆಸ, ಮುಂಡಿ ಕೆಸ, ಕಾಡ್ ಗೆಣಸ್, ಆಟಿ ಸೊಪ್ಪ್, ಚುಂಡೆ ಸೊಪ್ಪ್ (ಸಣ್ಣ ಚುಂಡೆ), ಒಂದೆಲೆ ಸೊಪ್ಪ್, ಸುರುಳಿ ಸೊಪ್ಪ್, (ಸೂರ್ಲ ಸೊಪ್ಪ್) ಕಾಡ್ ಪೇರಳ, ಕರ್ಮುಂಜಿ ಬಳ್ಳಿ(ತಡೆ, ಬೇರ್, ಹಣ್ಣ್) ಎದ್‌ರ್‌ಬಳ್ಳಿ ತಡೆ, ಸೊಪ್ಪ್, ಬೆಣ್ಣೆಗಾರ್ತಿ ಸೊಪ್ಪ್ (ತಡೆ),

ನೆಲನೆಲ್ಲಿ, ನೆಲ್ಲಿಕಾಯಿ, ಪಿದಮಲೆ, ತಿಮರೆ, ನನ್ನಾರಿ ಬೇರ್, ಗರಿಕೆ, ಪುದೀನ, ನೆಕ್ಕಿ ಸೊಪ್ಪು, ಸೋಮಾರಿ ಗಿಡದ ಎಲೆಬೇರು, ನೊಜಳ ಕೆತ್ತೆ, ಕಾಮಕಸ್ತೂರಿ, ಬಜ(ಬಜೆ), ನಾಗದಾಳಿ, ಕಾಡ್ ಜೀರಿಗೆ, ನಂಜಿನ ಬೀಜ, ನೇರಳೆ (ಹಣ್ಣ್, ಬೀಜ, ಸಿಪ್ಪೆ), ಬೇಂಗೆ ಮರದ ಹಾಲ್ (ರಸ) ಕಲ್ಲುಗುಡ್ಡೆ ಸೊಪ್ಪ್, ನಾಚಿಕೆ ಗಿಡ (ಮುಟ್ಟಿದರೆ ಮುನಿ) ಇದರ ಹೂಬಳ್ಳಿ, ಗರಗಸ ಬಳ್ಳಿ, ಬಿಳಿ ಉಮ್ಮತ, ಮತ್ತು (ಕರಿ ಉಮ್ಮತ ಇದನ್ನು ಉಪಯೋಗಿಸುವವು ಯಾವುದೇ ಕಾರಣಕ್ಕಾಗಿ ಕುಡಿಯಕ್ಕೆ ಕೊಡಕಾಗದ್). ಬರೀ ಲೇಪನಕ್ಕೆ ಮಾತ್ರ ಉಪಯೋಗಿಸಿ, ಕೊಕ್ಕೆಕಾಯಿ, ಪಂಚಳಿ ಎಲೆ, ಅಮೃತ ಬಳ್ಳಿ, ಕುರ್ಂಜೇಂಟಿ ವಾಲೆಮರದ ಎಣ್ಣೆಕಾಯಿ, ಆಲೆ ಮರ ಅದರ ಸಿಪ್ಪೆ(ಕೆತ್ತೆ) ಚೆಂಡು ಹೂಗಿಡದ ಸೊಪ್ಪು, ಪಟಾಕಿ ಸೊಪ್ಪ್ ಹಿಂಗೆ ಹತ್ತಾರ್ ಸೊಪ್ಪ್‌ಗ ಮತ್ತೇ ಅದರ ಬೇರ್‌ಗ ಇದೆಲ್ಲಾ ಪ್ರಕೃತಿ ನಿಯಮದ ಮದ್ದ್‌ಗ. ಅಂದ್ ಇಂತಾ ಹತ್ತ್ ಹಲವಾರ್ ಮದ್ದ್‌ಗಳನ್ನ ಋಷಿಮುನಿಗ ಹಿಮಾಲಯದ ಬೆಟ್ಟ ಸಾಲ್‌ಗಳಿಂದ ಹುಡ್‌ಕಿ ತರ್‌ತ್ತಿದ್ದೊ. ಈ ಬಗ್ಗೆ ಪಾಂಡು ರಾಜಂಗೆ ಮಕ್ಕಳಾಗದೆ ಇರ್‌ಕಾಕನ ಕುಂತಿ ಮತ್ತೆ ಮಾದ್ರಿನ ಕರ್‌ಕಂಡ್ ಪಾಂಡುರಾಜ ಹಿಮಾಲಯಕ್ಕೆ ಹೋಗಿ ಅಲ್ಲಿ ಕುಂತಿಗೆ 3 ಜನ ಗಂಡು ಮಕ್ಕಳ್ನನ ಹೆತ್ತದೆ. ಹಂಗೆನೆ ಮಾದ್ರಿ ಅವಳಿ ಮಕ್ಕಳ್ನನ ಹೆತ್ತದೆ. ಇವೆ ಪಾಂಡು ರಾಜನ ಮಕ್ಕ ಪಾಂಡವು.

**ಇನ್ ಮುಂದೆ :**

ಇನ್ ಮುಂದೆ ಇದೆಲ್ಲಾ ಈ ಪ್ರಕೃತಿಯಿಂದ ಪೂರ್ತಿ ನಾಶವಾಗಿ ಹೋದೆ. ಒಂದು ವೇಳೆ ಎಲ್ಲಿಯಾದರ್ ಒಂದೆರೆಡ್ ಗಿಡಗ ಸಿಕ್ಕರೆ ಅದರ ಹೆಸರ್ ಸಹ ಗೊತ್ತಿರುದುಲ್ಲೆ. ಅಂದರೆ ನಮ್ಮನ್ನ ನಾವೇ ಹಾಳ್ ಮಾಡಿಕೊಳ್‌ತ್ತೊಳೊ, ಈ ವಿಜ್ಞಾನ ಯುಗಲಿ. ಮಣ್ಣ್‌ತ್ತೇಳ್ದ್ ಗೊಸರಾಗಿ, ಕೆಸರಾಗಿ ನೀರ್‌ಲ್ಲಿ ಪೂರ್ತಿಯಾಗಿ ಕೊಚ್ಚಿಕೊಂಡ್ ಹೋದೆ. ಮರ ಗಿಡಗಿಳಿಗೆ ಬೇರ್

ಗಟ್ಟಿಯಾಗಿ ಹಿಡ್‌ದ್ ನಿಲ್ಲಿಕಾದುಲೆ. ಮಣ್ಣ್ ಜಾರ್‌ಕಾಕನ ಅಲ್ಲಿದ್ದ ಕಲ್ಲ್‌ಗ ಉರುಳಿ ಉರುಳಿ ಬಿದ್ದದೆ. ಮನೆ ಕಟ್ಟಡಗ ಕುಸ್ದ (ಜಾರಿ) ಬಿದ್ದವೆ. ಸೂರ್ಯನ ದಾವು ಹೆಚ್ಚಾದೆ, ಸೆಕೆ ತಡಿಯೊಕಾದುಲೆ. ಕೆಸರ್ ನೀರೆ ಹರಿಯೋದ್ರರಿಂದ ಕುಡಿಯಕೆ ನೀರಿಲ್ಲದಾದೆ. ಶಕ್ತಿವಂತ ಪ್ರಾಣಿಗ ಬಲಹೀನ ಪ್ರಾಣಿಗಳ ಮೇಲೆ ಬಿದ್ದ್ ಹೊಟ್ಟೆ ಹಸಿಯಕಾನ ಕೊಂದ್ ತಿಂದವೆ. ಕೀಟಗ ಹೆಚ್ಚಾದವೆ ಹೆಸರ್ ಹೇಳಿಕೇ ಆಗದಂತಹ ಕಾಯಿಲೆ ಬಂದ್ ಈ ಅತೀ ಬುದ್ಧಿವಂತತ್ತೇಳುವ ಮನುಷ್ಯ ಪೂರ್ತಿ ನಾಶ ಆದವೆ.

ಇದೇ ಪ್ರಕೃತಿ ನಿಯಮ, ಯಾರಿಂದ, ಯಾರಿಗೆ ಏನ್ ಮಾಡಿಕೆ ಆದುಲೆ. ಆಗ ಜನ ದೇವರ ಮೊರೆ ಹೋದುವೆ. ಅಲ್ಲಿಯವರೆಗೆ ದೇವರೇ ಇಲ್ಲೆತ ಹೇಳ್ದವು ಜಾಸ್ತಿ ಇದ್ದವೆ.

* * * * *

# ಜೀವನ ಶೈಲಿ

**ಅಂದ್ :**

ಅಂದ್ ಬಟ್ಟೆ ಬರೆ ಇಲ್ಲದೆ ಮೈ ಮುಚ್ಚಿಕಂಬಕ್ಕೆ ಗೊತ್ತಿಲ್ಲದೆ ಹೊಟ್ಟೆ ಹಸಿವಾಕನ ಸಿಕ್ಕಿದ ಗಡ್ಡೆ ಗೆಣಸ್, ಸೊಪ್ಪ್, ಅಂದರೆ ಪ್ರಾಣಿಗಳಂಗೆ ಹಕ್ಕಿಗಳಂಗೆ ಮರದ ಬುಡಲಿ ಅಥವಾ ದೊಡ್ಡ ಮರಗಳ ಕೊಂಬೆಗಳ ಬುಡಲಿ ಇರುತ್ತಿದ್ದೊ, ಆಹಾರಕ್ಕಾಗಿ ಪ್ರಾಣಿಗಳ ಕೊಲ್ಲಿಕ್ಕಾಗಿ, ಕೆಲವು ಚೂಪಾದ ಆಯುಧಗಳ್ನ ಮಾಡುತ್ತಿದ್ದೊ. ಬಿಲ್ಲ್ ಕಲ್ಲ್ ಹೊಡೆಯದು, ಕವಣೆ ಕಲ್ಲ್ ಹೊಡೆಯದು, ಬಿದ್‌ರ್ನ ಬಿಲ್ಲ್ ಬಾಣ ಮಾಡಿಕೊಂಬದ್, ಕುಸ್ತಿ ಆಡ್‌ದು (ಗುದ್ದಿ ಆಡ್‌ದು) ಇದೆಲ್ಲಾ ಹಸಿವಿಗಾಗಿ.

ಮೊದಲಿಗೆ ಮನುಷ್ಯಂಗೆ ಮಾತಾಡಿಕೆ ಗೊತ್ತಿತ್‌ಲ್ಲೆ. ಅವು ಪ್ರಾಣಿಗಳಂಗೆ ಸನ್ನೆಯಿಂದ ಅಥವಾ ಸ್ವರ ತರಂಗಗಳ ಆಲಿಸಿ ತನ್ನತನ್ನವರ ಗುಂಪುಗಳ ಸೇರಿಕೊಳ್‌ತ್ತಿದ್ದೊ. ಬೆವರ್ ಮತ್ತೆ ಮೈ ಸಿಂಡ್‌ಗಳ್‌ಂದ ಗುರ್ತಿಸಿಕೊಂಬತ್ತಿದ್ದೊ. ಇದ್ ಪ್ರಾಣಿಗಳಲ್ಲಿ ಈಗಲೂ ಉಟ್ಟ್ ಯಾಕೆ ತ್ತೇಳ್‌ರೆ ಮಾತಾಡಿಕೆ ಬಾದುಲೆ. ಅದ್‌ಕ್ಕಾಗಿ ಮನುಷ್ಯರಲ್ಲಿ ಸಹ ಈಗಲೂ ಇದನ್ನ ಇಲ್ಲೆತ ಹೇಳಿಕೆ ಆದುಲ್ಲೆ.

ಉದಾ: ನೂರಾರು ಜನರ ಒಂದ್ ಗುಂಪ್‌ಂದ ಒಬ್ಬ ಜೋರಾಗಿ ಕಿರ್ಚಿದೆ ಅಥವಾ ಬಾಯಿ ಬಡ್‌ದದೆ ಆ ಸ್ವರ ಕೇಳುವಷ್ಟು ದೂರಲಿ ಒಬ್ಬ ಇದ್ದರೆ ಇದನ್ನ ಆಲಿಸಿ ಅದ್ ಇಂತವನ ಸ್ವರ ಅಥವಾ ಕೂಗ್‌ತ್ತೇಳುವೆ.

**ಇಂದ್** : ಇಂದ್ ಮನುಷ್ಯ ಹಿಂದಿನ ಮಟ್ಟಂದ ವಿಕಾಸಗೊಂಡ್ ಮುಂದ್‌ವರ್ದ್ ಈಗೀನ ಮಟ್ಟಕ್ಕೆ ಬಂದೊಳೊ. ಆದರೆ ಹಿಂದಿನವರ ಅಥವಾ ವಂಶಪಾರಂಪರೆಯಾಗಿ ಬಂದಂತಹ ಉಡುಗೆ ತೊಡುಗೆಗಳ್ನ ಈಗೀಗ ಹೆಚ್ಚೆಚ್ಚಾಗಿ ಅಳವಡಿಸಿಕೊಳ್ತೊಳೊ. ಕಾರಣ ನಮ್ಮ ಅಂದರೆ ಭಾರತದ ಸಂಸ್ಕೃತಿ ಇತರ ಯಾವುದೇ ದೇಶಗಳ ಸಂಸ್ಕೃತಿಗೆ ಹೋಲಿಸಿ ನೋಡ್‌ರೆ ಆಥವಾ ಪುರಾಣದ ಕಥೆಗಳಿಗೆ ಹೋಲಿಸಿ ನೋಡ್‌ರೆ ನಮ್ಮ ದೇಶದ ಸ್ತ್ರೀಯರಿಗೆ (ಹೆಂಗಸರಿಗೆ) ಅತ್ಯುತ್ತಮವಾದ ಗೌರವ ಉಟ್ಟು. ಆದರೆ ಹೊಟ್ಟೆ ಪಾಡಿಗಾಗಿ ಹೊರ ದೇಶಗಳಿಗೆ ಹೋಗಿ ಅಲ್ಲಿನ ಸಂಸ್ಕೃತಿನ ಅಳವಡಿಸಿಕಂಬಂತ ಜನರ್ ಈಗೀಗ ಬಹಳಷ್ಟ್ ಒಳೊ. ಇದ್‌ಕೆ ಹೊಂದಾಣಿಕೆ ಆಗುವಂತ ಸಿನೆಮಾ ಮತ್ತು ಮಾಧ್ಯಮದಲ್ಲಿ ತೋರಿಸುವಂತ (ಅತೀ ಕೆಳಮಟ್ಟದ) ಬಟ್ಟೆಗಳ್ನ ಉಟ್ಟ್‌ಕಂಡ್ ಮೈಯ ಬಹಳಷ್ಟು ಹೆಚ್ಚಿನ ಭಾಗಗಳ್ನ ಪ್ರದರ್ಶನ ಹಣದ ಆಸೆಗಾಗಿ ಕೊಡ್‌ತೋಳೊ. ಇದು ಇಂದಿನ ವ್ಯಾಪಾರದ ಮಟ್ಟ ಆಗುಟ್ಟು.

**ಇನ್ನ್ ಮುಂದೆ** : ಇನ್ನ್ ಮುಂದೆ ನಮ್ಮ ದೇಶದ ಎಲ್ಲಾ ನಾಗರಿಕರಿಗೆ ಸರ್ವ ಸ್ವಾತಂತ್ರ್ಯ ಉಟ್ಟ್‌ತ್ತೇಳಿ ರಾಜಕೀಯದ ಬೆಳವಣಿಗೆಗಳ್ನ ಮುಖ್ಯ ಗುರಿಯಾಗಿಟ್ಟ್‌ಕಂಡ್ ನಮ್ಮನ್ನ ನಾವೇ ಹಾಳ್ ಮಾಡಿಕಂಡವೆ. ಹಂಗೆನೇ ಈಗೀನ ಸಂಸ್ಕೃತಿಯಲ್ಲಿ ಕಾಂಬಂತ ಸಿನೆಮಾ ಮತ್ತೇ ಮಾಧ್ಯಮಗಳಲ್ಲಿ ಕಂಡು ಬರುವಂತ ಉಡಿಗೆ ತೊಡಿಗೆಗಳ್ನ ನಮ್ಮ ಮಕ್ಕ ಹಾಕಿ ಮೆರೆಯಲಿತ್ತೇಳಿ ಅವರವರ ಅಪ್ಪ ಮತ್ತೆ ಅವ್ವಂದ್‌ರ ಹೇಳುವೆ. ಇದರ್‌ಂದಾಗಿ ಅನಾದಿ

ಕಾಲಲಿ ಬಟ್ಟೆ ಬರೆ ಇಲ್ಲದ ಹೆಂಗಿದ್ದೊಳೊ ಅದಕ್ಕಿಂತ ಒಂದು ಹೆಜ್ಜೆ ಕೆಳಗಿಳಿದ್ ಅಪ್ಪ ಅವ್ವನ ಲೆಕ್ಕಕಿಲ್ಲೆ ಒಡ ಹುಟ್ಟಿದವರ ಲೆಕ್ಕಕಿಲ್ಲೆ, ಕುಟುಂಬ, ಸಮಾಜ, ಸಂಸ್ಕೃತಿತ್ತೇಳ್ದು ಲೆಕ್ಕಕಿಲ್ಲದೆ, ದೇವರು ಮತ್ತೆ ದೆವ್ವತ್ತೇಳ್ದು ಒಂದು ಮೂಡನಂಬಿಕೆತ್ತೇಳಿಕೊಂಡ್ ಸರ್ವಸ್ವನ ಕಳಕಂಡವೆ. ಅಲ್ಲಿಗೆ ಭವಿಷ್ಯ ಕಲಿಯುಗ ಅಂತ್ಯ ಆದ್‌ತ ಕಂಡದೆ. ಅಂದರೆ ಕಲಿಯುಗ ಸುರಾಗಿ ಸುಮಾರು 6 ಸಾವಿರ ವರ್ಷ ಕಳ್‌ದುಟ್ಟುತ್ತೇಳಿವೆ. ಇನ್ನೂ ಸುಮಾರ್ 29 ಸಾವಿರ ವರ್ಷ ಬಾಕಿ ಉಟ್ಟ್‌ತ್ತೇಳುವೆ. ಆಗ ನಾವಿಂದ್ ಕಾಂಬಂತ ಪ್ರಕೃತಿ ಇರ್‌ದುಲ್ಲೆ. ಹೊಟ್ಟೆಗೆ ಹಿಟ್ಟಿಲ್ಲದಾದೆ, ಕುಡಿಯಕೆ ನೀರಿಲ್ಲದಾದೆ, ಗಾಳಿಗೆ ತಣ್ಣಗೆ ಇರುನೊತ್ತೇಳ್ರೆ ಮರ ಗಿಡತ್ತೇಳ್ದು ಇರುದ್‌ಲೆ. ಆಗ ಈಗ ಮನುಷ್ಯತೇಳುವ ನಮ್ಮ ವರ್ಗದವು ಪ್ರಾಣಿ, ಪಕ್ಷಿ (ಹಕ್ಕಿ) ಮತ್ತೆ ಜಂತುಗಳಿಗಿಂತ ಹೀನ ಸ್ಥಿತಿಗೆ ಬಂದೇ ಬಂದವೆ ಇದ್ ಪ್ರಕೃತಿ ನಿಯಮ ಅಂದರೆ ಕಾಲ ಚಕ್ರ.

* * * * *

# ದೇಶ ರಾಜ್ಯ ಅಭಿವೃದ್ಧಿ ಅಂತ್ಯ ಬಗ್ಗೆ

**ದೇಶ ಮತ್ತೆ ರಾಜ್ಯ ಅಭಿವೃದ್ಧಿ ಅಂತ್ಯ**

ಮಹಾಭಾರತದ ಪರ್ವತ್ತೇಳುವ ಒಂದು ಪುಸ್ತಕದ ಭಾಗಂದ ಆರಿಸಿದ ಕೆಲವು ಅಂಶಗಳನ್ನ ಉದಾಹರಣೆ ತಕಂಡ್ ಇದರ ಬರ್‌ದದ್.

1. ನಮ್ಮ ದೇಶ, ನಮ್ಮ ರಾಜ್ಯ, ನಮ್ಮ ಧರ್ಮ, ಮತ್ತೆ ನಮ್ಮ ಋಷಿಮುನಿಗಳ ಉಪದೇಶದಂಗೆ ಹಿಂದೆ ಬರ್‍ದಂತ ಪುರಾಣ, ಶಾಸ್ತ್ರ, ವೇದಮಂತ್ರ, ತಂತ್ರ, ಔಷಧಿ (ಮದ್ದ್‌ಗ) ಸತ್ಯ ಧರ್ಮಕ್ಕಾಗಿ ಹೋರಾಟ, ಪೂಜೆ ಪುರಸ್ಕಾರ , ದೇವಾಧಿ ದೇವತೆಗ ಮತ್ತೆ ಅವರ ಹೆಸರ್ ಮತ್ತೆ ಅವರ ಅಧಿಕಾರ ನಿಯಮ, ಪೂಜಾ ಕ್ರಮ, ಜಾತಿ, ನಿಯಮ ಇದೆಲ್ಲಾ ಅನಾಧಿಕಾಲಂದ ನಡ್‌ಕಂಡ್ ಬರ್‌ತುಟ್ಟು. ಅಂದರೆ ಇದನ್ನ ಸತ್ಯಯುಗ, ತ್ರೇತಾಯುಗ, ದ್ವಾಪರಯುಗ ಮತ್ತೆ ಕಲಿಯುಗತ್ತೇಳಿ ವಿಂಗಡಿಸಿಯಳೊ. ಇದರ ಪ್ರಕಾರ ನಾವು ಈಗ ಕಲಿಯುಗದ (6 ಸಾವಿರ ) ವರ್ಷಗಳಲ್ಲಿ ನಡಿತ್ತೋಳೊ. ಮತ್ತೆ ಮುಂದಿನ ವರ್ಷಗಳ ಅವಧಿಯಲ್ಲಿ ಏನೇನ್ ಆದುತ್ತೇಳಿ ನೀವೇ ಗ್ಯಾನ ಮಾಡಿಕಣೀ.

# ಪ್ರಪಂಚ

| ವಾಸಕ್ಕೆ ಮನೆ | | ಸಂಗಜೀವಿಗ (ಜಾತಿ) | |
|---|---|---|---|
| 1 | | 2 | |
| ಜಲ | ಋಷಿ | ಸ್ತ್ರೀ | ಭೂಮಿ |
| 1 | 2 | 3 | 4 |

1. ಪೂರ್ತಿಯಾಗಿ ನೀರ್, 2. ಅಲ್ಲಲ್ಲಿ ಭೂಮಿ– ಈ ಭೂಮಿಲಿ ಋಷಿಮುನಿಗ
3. ಮತ್ತೇ ಸ್ತ್ರೀ 4. ಈ ಭೂಮಿ ಸೃಷ್ಟಿ ಆದೆ, ಅದಿಕ್ಕೆ ಮುಂದೆ ಆದಿಶೇಷನ ಮ್ಯಾಲೆ ಮಲಗಿದ್ದ ಕೃಷ್ಣ ಪರಮಾತ್ಮನ ಬಣ್ಣ ಕಪ್ಪು (ಕರ್ಂಗೆ) ಅತಿ ದೂರಲ್ಲಿ ಅಂದರೆ ಆಕಾಶತ್ತೇಳುವ ಒಂದು ಎತ್ತರಲಿ ಒಂದ್ ಬೆಳಕ್ ಇದ್ ಆದಿಶಕ್ತಿ ರಾಜರಾಜೇಶ್ವರಿ.

ಇಲ್ಲಿ ಮೂಲತ್ತೆಳ್ದು, ಪ್ರಕೃತಿ ಸೃಷ್ಟಿ, ಇದ್ ಹೆಂಗೆ ಆಗಿರುದು. ಯಾವುದೇ ಒಂದ್ ಜೀವಿ ಹುಟ್ಟಿ ಬೆಳೆಯೋಕ್ತಾದ್ರೆ ಒಂದ್ ಹೆಣ್ಣ್ ಭ್ರೂಣ ಮತ್ತೊಂದು ಗಂಡ್ ಭ್ರೂಣಂದ ಪರಾಗ ಸ್ಪರ್ಶಂದ ವಾತ್ರತ್ತೇಳ್ದ್ ಎಲ್ಲವುಕೂ ತಿಳ್ದ ವಿಷಯ. ಅಂದರೆ ಈ ಪ್ರಕೃತಿಯಲ್ಲಿರುವ ಸಕಲ ಜೀವಿಗಳ ಮೂಲ ಭ್ರೂಣದ ಕಣ ಶ್ರೀಕೃಷ್ಣ

ಪರಮಾತ್ಮಂದ್ ಆದಿಶಕ್ತಿ "ಯಾ" ರಾಜರಾಜೇಶ್ವರಿ ಶ್ರೀ ಕೃಷ್ಣನ ಸಂಪರ್ಕ ಹೊಂದಿ ಸುರುಗೆ ಈ ಭೂಮಿನ ಸೃಷ್ಟಿ ಮಾಡುವೆ. ಆಮೇಲೆ ಈ ಪ್ರಕೃತಿಯಲ್ಲಿರುವಂತ ಸಕಲ ಜೀವಿಗಳ ಜೀವ ಕಣಗಳ ಬಿತ್ತಿ ಬೆಳೆಸುವೆ. ಹಂಗೇನೆ ಬ್ರಹ್ಮ, ವಿಷ್ಣು, ಮಹೇಶ್ವರರನ್ನ್ ಸೃಷ್ಟಿಸಿ ಅವುಕೆ ಆಶೀರ್ವದಿಸಿ ಈ ಪ್ರಪಂಚ ಅಥವಾ ಪ್ರಕೃತಿಯ ಪ್ರತಿಯೊಂದು ಜೀವಿಗಳ ಭಿತ್ತನೆ, ಬೆಳೆಸುವಿಕೆ ಮತ್ತೆ ನಿರ್ಮೂಲನೆಗಳ ಬಗ್ಗೆ ಪೂರ್ತಿ ಮಾಹಿತಿ ನೀಡಿ ಅವಿಬ್ಬರ್ ಮಾಯವಾದವೆ. ಅದೆ ಸಂದರ್ಭಲಿ ತಾಯಿ, ದೇವಿ ಹೇಳ್ದೆ ನೀವು ಅತಿ ತೊಂದರೆಲಿ ಇರುವಂತ ಸಂದರ್ಭ ಒದಗಿ ಬಂದದೆ. ಆಗ ನಮ್ಮನ್ನ ಕಾಂಬಕ್ಕಾಗಿ ಈ ರೀತಿಯಾಗಿ ಪ್ರಾರ್ಥನೆ ಅಥವಾ ತಪ್ಪಸ್ಸು ಮಾಡಿ ಆಗ ನಾವ್ ನಿಮಗೆ ಪ್ರತ್ಯಕ್ಷ ಆದವೆತೇಳಿ ಹೇಳ್ದ ಪ್ರಾರ್ಥನೆಯೆ ಈಗ ಮಂತ್ರವಾಗಿ ಉಳ್ದದ್. ಅವು ಹೇಳ್ದಂಗೆ ಏಕಾಗ್ರತೆಯಿಂದ ಪ್ರಾರ್ಥನೆ ಅಥವಾ ತಪಸ್ಸು ಮಾಡ್ದು ಸಾಮಾನ್ಯ ಮನುಷ್ಯರಿಗೆ ಸಾಧ್ಯವಾಗದ್ದರ್‌ಂದ ಈ ಮೂಲ ದೇವರ್‌ನ ಕಾಂಬೋದು ಅಸಾಧ್ಯವಾಗುಟ್ಟು. ಅವಿರುವ ಜಾಗ ಅದನ್ನೇ ವೈಕುಂಟ ಅಥವಾ ಸ್ವರ್ಗಲೋಕತಾ ಹೇಳ್ದು. ಅಲ್ಲಿಗೆ ಈ ಪ್ರಪಂಚಲಿ ಯಾವುದೇ ಒಂದು ಸಣ್ಣ ತಪ್ಪು ಸಹ ಮಾಡದಂತವು ಇದ್ದರೆ ಅವರ ಆತ್ಮ ಮಾತ್ರ ಹೋಕೇ ಹೊರತ್ ಇನ್ನಾವ ಶರೀರಕ್ಕೂ ಹೋಕೆ ಸಾಧ್ಯ ಇಲ್ಲೆ. ಈ ಸ್ವರ್ಗಲೋಕದ ಅಧೀನದಲ್ಲಿ ಹಿಡಿತಲಿ ಇರುವಂತ ಲೋಕವೆ ದೇವಲೋಕ ಈ ದೇವಲೋಕಗಳ್ನ ಸೃಷ್ಟಿಸಿಕಂಡದ್ ಈ ಬ್ರಹ್ಮ, ವಿಷ್ಣು ಮಹೇಶ್ವರ ಅಂದರೆ.

1. ಬ್ರಹ್ಮ ಲೋಕ ಬ್ರಹ್ಮ ಸೃಷ್ಟಿ
2. ವಿಷ್ಣು ಲೋಕ ಪಾಲನೆ ( ರಕ್ಷಣೆ)
3. ಶಿವ ಲೋಕ ಮೇಲುಸ್ತುವಾರಿ ಮತ್ತು ಅಂತ್ಯ

ಅಂದ್ ಸೃಷ್ಟಿಸಿದ ಸೃಷ್ಟಿಯ ರಕ್ಷಣೆಗಾಗಿ ಬ್ರಹ್ಮ ಸೃಷ್ಟಿ ಮಾಡಿ ಅವ್‌ಕೆ ಒಂದೊಂದು ಅಧಿಕಾರ ಕೊಟ್ಟವೆ. ಅವೆ ಗಣಾಧಿ ದೇವತೆಗ. ಈ ದೇವತೆಗಳಿಗೆ ಮತ್ತೆ ಋಷಿಮುನಿಗಳಿಗೆ ನಿಕಟ ಸಂಪರ್ಕ ಅಂದರೆ ಅತೀ ಹತ್ತಿರದ ಬಾಂದ್ಯವ ಅಥವಾ ಸಂಬಂಧಗಳಿದ್ದವೆ. ಈ ಸಂಬಂಧದಿಂದಾಗಿ ಅವು ಅಂದಿನ ಕಾಲದ ಭಾಷೆಲಿ ಒಂದು ವರ್ಷತ್ತೇಳಿರೆ 365 ದಿನ ( ಮುನ್ನೂರೆ ಅರವತ್ತೈದು ದಿನ ಒಂದು ತಿಂಗಳು ತ್ತೇಳಿರೆ ಮೂವತ್ತು ದಿನ , ಒಂದು ವಾರ ತ್ತೇಳಿರೆ 7 ದಿನ ಹಂಗೆನೆ ಈ ದಿನಗಳಿಗೆಲ್ಲಾ ಈ ಗಣಾಧಿದೇವತೆಗಳ ಹೆಸರನ್ನು ಗೊತ್‌ಮಾಡಿಸಿಕಂಡ್ ಈ ಗಣಾಧಿದೇವತೆಗ ಯಾಗ್ಯಾಗ ಹೆಂಗೆ ಹೆಂಗೆ ನಡೆಯೋಕು ಅಥವಾ ಹೆಂಗೆ ಹೆಂಗೆ ನಡೆಸಿಕಂಡ್ ಹೋಕ್‌ತ್ತೇಳುವ ಅಭಿಪ್ರಾಯಗಳನ್ನ ಒಬ್ಬೊಬ್ಬ ಗಣದೇವತೆಗಳಿಗೆ ಅಧಿಕಾರ ಕೊಟ್ಟವೆ. ಇದನ್ನ ಈ ಋಷಿ ಮುನಿಗಳ ಮುಖಾಂತರ ಅಂದಿನ ಕಾಲಕ್ಕೆ ತಕ್ಕಂಗೆ ಬರ್ದವೆ. ನಮ್ಗೆ ತಿಳ್‌ದಂಗೆ ಅದ್ ಸಂಸ್ಕೃತ ಭಾಷೆತ್ತೇಳಿವೆ. ಆದರೆ ಇದ್ ಈ ಮಾನವಂಗೆ ಗೊತ್ತಾದುಲೆ. ಇದನ್ನು ಗೊತ್ತುಪಡಿಸಿಕ್ಕಾಗಿ ಸರಸ್ವತಿ ಗಣಪತಿ ದೇವರಿಗೆ ಆಶೀರ್ವಧಿಸಿ ಅಧಿಕಾರ ಕೊಟ್ಟವೆ. ಇದರ ಆಶೀರ್ವಾದದ ಶ್ರಮದಿಂದಾಗಿ ಈ ಮಾನವ ಮೊದಲಿಗೆ ಸನ್ನೆ ಮುಖಾಂತರ ಮಾತಾಡಿಕೆ ಕಲ್ತವೆ. ಬರಿ ಮಾತಾಡಿಕೆ ಕಲ್ತರೆ ಸಾಲದಲ್ಲ, ಹಸಿವಿಗೆ ಹೊಟ್ಟೆ ಪಾಡಿಗೆ ಯಾವುದಾದರೊಂದು ಉಪಾಯ ಬೇಕಲ್ಲಾ ಇದ್ ಮನ್ಸಂಗೆ ಮಾತ್ರ ಅಲ್ಲ. ಈ ಪ್ರಪಂಚಲಿ ಇರುವಂತ ಸಕಲ ಜೀವಿಗಳಿಗೆ ಸಂಬಂಧಿಸಿದ್, ಇದ್‌ಕ್ಕಾಗಿ ಭಾಗ್ಯಲಕ್ಷ್ಮೀ ದೇವಿಗೆ ಸಕಲ ಅಧಿಕಾರ ಕೊಟ್ಟವೆ. ಈ ಭಾಗ್ಯಲಕ್ಷ್ಮೀಗೆ ಬಹಳ ದೊಡ್ಡ ಹೊರೆ ಆದೆ. ಲಕ್ಷ್ಮೀ ಏನ್ ಮಾಡ್ದೇ ಗೊತ್ತಾ ಇಂಧ್ರ, ವರುಣ, ಅಗ್ನಿ, ವಾಯು ಮತ್ತೇ ಯಮತ್ತೇಳುವ ಗಣಗಳ ಸಹಾಯ ಕೇಳಿದೆ.

ಹಂಗೇನೆ ಸೂರ್ಯ ಮತ್ತು ಚಂದ್ರ ಗಣಗಳ ಪಾಲನೆಗೆ ಸಹಕಾರ ಕೇಳಿಕಂಡ್ ಈ ಪ್ರಪಂಚದ ಏಳ್ಗೆಗೆ ಸುರು ಮಾಡುವೆ. ಇವರ ಸಹಕಾರದಿಂದ ಇಂದಿಗೂ ಮಾಡುತ್ತಿರುದು ಈ ಕೆಳಗಿನ ಕಲ್ಪನೆಗಳಿಂದಾಗಿ. ಆದರ್ಂದ ಇದನ್ನ ನಿಜತ್ತೇಳಕ್.

27 ನಕ್ಷತ್ರಗ, 12 ರಾಶಿಗ, 7 ದಿನಗ, 24 ಗಂಟೆ ಮತ್ತೆ ಗಳಿಗೆ ಇದರ ಆಧಾರದ ಮೇಲೆ ಇಂದ್ ನಡೆಯುವ ಪಂಚಾಗದ ಅಭಿಪ್ರಾಯದ ಇದ್ ಜೋತಿಷ್ಯ ಶಾಸ್ತ್ರಕ್ಕೆ ಸಂಬಂಧಿಸಿದಂಗೆ ಇದ್ ಒಂದ್ ಗೊತ್ತು ಪಡಿಸಿಕೊಂಡ ಗುರಿನ ಮುಟ್ಟುವಂತ ಕಾಲ್ಪನಿಕ ಅಳತೆಕೋಲು ಅಥವಾ ನಮ್ಮೆಲ್ಲರ ಅಂದರೆ ಸಕಲ ಜೀವಿಗಳ ಮೂಲ. ಈ ಮೂಲದ ಆಧಾರ್ಂದ ನಾವಿಂದ್ ಬದ್ಕಿ ಬಾಳಿ ಈ ಮಟ್ಟಕ್ಕೆ ತಲ್ಪ್‌ತೊಳೊ.

ಜೀವಿಗಳ ಜೀವರಕ್ಷಣೆ ಮತ್ತೆ ಹಸಿವನ್ನು ನೀಗಿಸಿಕ್ಕಾಗಿ ಹಂಗೆನೆ ಈ ಪ್ರಪಂಚದ ಸಮತೋಲನ ಕಾಪಾಡಿಕ್ಕಾಗಿ ಈ ನಕ್ಷತ್ರ, ರಾಶಿ ಮತ್ತೆ ಯಮಂಗೆ ಅಧಿಕಾರ ಕೊಟ್ಟವೆ.

ಯಮ, ಬ್ರಹ್ಮ, ವಿಷ್ಣು, ಈಶ್ವರ ಮತ್ತೆ ದೇವಾದಿ ದೇವತೆಗಳ (ಗಣಗಳ) ಸೂಚನೆಯಂಗೆ ಸದಾ ಈ ಪ್ರಪಂಚನ ಸಮತೋಲನವಾಗಿ ಇಟ್ಟದೆ, ಅದ್ ಅಂದ್‌ಂದ ಇಂದ್ ಮುಟ್ಟ ಒಂದೆ ತರ ನಡ್‌ಕಂಡ್ ಬರ್‌ತುಟ್ಟು. ಇದ್ ಹಂಗೆ, ಇದ್ ಬರ್‌ದ್ವವನ ಕಲ್ಪನೆತ್ತೇಳಿ ಇದನ್ನ್ ಓದಿದವು ಅಥವಾ ತಿಳ್ದವು ಕೇಳಿರೆ ಈ ಕೆಳಗಿನ ಒಂದೇ ಒಂದ್ ಉತ್ತರ.

ಈ ಪ್ರಕೃತಿತ್ತೇಳ್ದು ಒಂದು ದೊಡ್ಡ ಬರ್‌ಂಜಿ ಅಥವಾ ಒಂದು ಗೂಡು, ಅಥವಾ ಒಂದು ಉರ್‌ಟಾದ ಚೆಂಡ್‌ನ ಒಳಭಾಗತ್ತೇಳಿ ಇಟ್‌ಕಣಿ, ಈ ಬರ್‌ಂಜಿ ಅಥವಾ ಗೂಡು, ಹಂಗೆನೆ ಉರ್‌ಟಾದ ಚೆಂಡ್‌ನ ಒಳಭಾಗಲಿ ಸಕಲ ಜೀವಿಗಳ ಹುಟ್ಟಿ ಬೆಳೆದ್ ಮತ್ತೆ ಸಾಯದು, ನೀರ್ ಬೆಳಕ್ ಮತ್ತೆ ಹೊಗೆ, ಗಾಳಿ ಅದಕ್ಕೆ ಸಂಬಂಧಿಸಿದ ಎಲ್ಲಾ ಆಮ್ಲಗಳ ಮತ್ತೆ ಆಧಿರ್‌ಗ ಅಂದರೆ

ಚಿನ್ನ, ಬೆಳ್ಳಿ, ತಾಮ್ರ ಮತ್ತೆ ಕಬ್ಬಿಣ ಇದರ ಮೂಲಗಳ ಒಟ್ಟು ಗೂಡಿಸಿ ಈ ಗೂಡಿನ ಒಂದೊಂದು ಭಾಗಗಳಲ್ಲಿ ಅಡಗಿಸಿಟ್ಟ್ಟು. ಆದ್ರ್ಂದ ಅದನ್ನ ಹುಡುಕಿ ಯಾ ಸಂಶೋದನೆ ಮಾಡಿ ನೀವು ಅದನ್ನ ಪರಿವರ್ತಿಸಿದರೆ ಅಥವಾ ಒಂದು ಜಾಗಂದ ಇನ್ನೊಂದು ಜಾಗಕ್ಕೆ ಸಾಗಿಸಿ ಅಲ್ಲಿ ಇನ್ನ್ಯಾವುದೇ ಅಭಿವೃದ್ಧಿ ಮಾಡಿರೂ ಸಹ ಈ ಗೂಡಿನ ಒಳಗೆ ಇಟ್ಟಂತ ಮೂಲ ವಸ್ತುಂದ ಮಾತ್ರ. ಅಂದರೆ ಈ ಜೀವಿಗ ಎಲ್ಲಾ ಸಂಗ ಜೀವಿಗ. ಅದ್ ಅಂದ್ ಒಂದೆ, ಇಂದ್ ಸಹ ಒಂದೆ, ಇನ್ ಮುಂದೆ ಸಹ ಒಂದೆ, ಬೆಳವಣಿಗೆ ಮಾತ್ರ ಬ್ಯಾರೆ ಬ್ಯಾರೆ, ಆಕಾರ್ಗ ಮಾತ್ರ ಬ್ಯಾರೆ ಬ್ಯಾರೆ.

ಹಂಗೆನೆ ಇನ್ನು ಸುಲಭವಾಗಿ ತಿಳಿಕಂಬಂತ ಒಂದು ಉದಾ: ಈ ಭೂಮಿ ಅಥವಾ ಪ್ರಕೃತಿತ್ತೇಳುವ ಒಟ್ಟು ಮೂಲದ ತೂಕನ ಒಂದು ತಕ್ಕಡಿಯ ಒಂದು ತಟ್ಟೆಗೆ ಹಾಕಿ ಅದರ ತೂಕನ ನೋಡಿಕಣಿ, ಮತ್ತೇ ಈ ಪ್ರಕೃತಿಯ ವಿಸ್ತರಣೆ ಅಭಿವೃದ್ಧಿ ಬೆಳೆಯುವಂತ ಜನಸಂಖ್ಯೆ ಕಟ್ಟಡಗ, ವಾಹನಗ, ಮರಗಿಡಗ ಮತ್ತೆ ಜಂತು ಹಂಗೆನೆ ಕ್ರೀಮಿ ಕೀಟಗ ಅವೆಲ್ಲದರ ತೂಕನ ತಕ್ಕಡಿಯ ಇನ್ನೊಂದು ತಟ್ಟೆಲಿ ಇಟ್ಕಂಡ್ ತೂಕ ಮಾಡಿ, ಮೊದಲಿನ ಮೂಲ ತೂಕ ಕಡಿಮೆಯಾದುಲೆ, ಯಾವುದೇ ಕಾರಣಕ್ಕೂ ನಿರ್ದಿಷ್ಟ ತೂಕಕ್ಕಿಂತ ಹೆಚ್ಚಾದುಲೆ. ಇದ್ ಸದಾ ಸಮತೋಲನವಾಗಿದ್ದದೆ. ಅಂದರೆ ಮೂಲ ವಸ್ತುಗಳಿಂದ ಬೇರ್ಪಟ್ಟು ಹೊಸ ವಸ್ತು ಆದೆ ಹಂಗೆನೆ ಮೂಲ ಸ್ಥಳಗಳ್ಂದ ಜಾಗ ಬದಲಾಯಿಸಿ ಬ್ಯಾರೆ ಬ್ಯಾರೆ ಜಾಗಗಳಲ್ಲಿ ಅಳವಡಿಸಿ ಇಟ್ಕಂಡವೆ. ಈ ಪ್ರಕೃತಿಯ ಯಾವ ಯಾವ ಮೂಲೆ ಮೂಲೆಗೆ ಹೋದರೂ ಅಥವಾ ಮೂಲೆ ಮೂಲೆಲಿ ಇಟ್ಟ್ಕಂಡರೂ ಸಹ ಮೂಲ ತೂಕ ಮಾತ್ರ ಒಂದೆ. ಅಂದರೆ ಈಗ ಸಾಮಾನ್ಯವಾಗಿ ಬುದ್ಧಿ ಜೀವಿಗಳಾದ ನಾವು ಹೇಳುತಿರ್ದು ಅಯ್ಯೋ ಇದೇನ್ ಅಭಿವೃದ್ಧಿ ಇದೇನ್ ಜನಸಂಖ್ಯೆ,

ಈ ಭೂಮಿಗೆ ಈ ತೂಕನ ತಡ್‌ಕಂಬಕ್ಕಾಗದೆ ಎಲ್ಲಾ ಮುಳುಗಿ ಹೋದೆ. ನೋಡಿ ಬೇಕರೆ ಇದ್ ನಾನ್  ಹೇಳ್ದ್ ನೀವು ಕೇಳ್ದ್, ಇದ್ರಲ್ಲಿ ಸ್ವಲ್ಪ ಸತ್ಯ ಉಟ್ಟು ಅದ್‌ತ್ತೇಳಿರೆ ಈ ಭೂಮಿಯ ಅಥವಾ ಪ್ರಕೃತಿಯ ಯಾವ ಭಾಗದಲ್ಲಾಗಲಿ ಅತಿ ಹೆಚ್ಚಾಗಿ ಒಂದೇ ಕಡೆ, ಗಾಳಿ ಒತ್ತಡಂದ  ಬಂದರೆ ಒಂದು ದೊಡ್ಡ ಮರದ  ಒಂದು ಬರಿಲಿ ಇದ್ದಂತ ಒಂದು ಕೊಂಬೆ ಮುರ್ದ್ ಬಿದ್ದಂಗೆ. ಆದರೆ ಎಲ್ಲಾ ಮೂಲಗಳ ಒಟ್ಟು ತೂಕ ಒಂದೆ ಇದ್ದದೆ. ಒಂದೊಂದು ಬದಿಲಿ ತೂಕ ಜಾಸ್ತಿಯಾಕನ ಭೂಕಂಪ ಆದೆ ಅಷ್ಟೇ.

* * * * *

# ಸಂಗಜೀವಿಗ

**ಅಂದ್ :** ಈ ಪ್ರಕೃತಿಯಲ್ಲಿ ಇರುವ ಪ್ರತಿಯೊಂದು ಜೀವಿಗ ಸಹ ಸಂಘ ಜೀವಿಗಳೆ. ಮನುಷ್ಯಂಗೆ ವಾಸಕ್ಕೆ ಮನೆ, ಹಕ್ಕಿಗೆ ವಾಸಕ್ಕೆ ಗೂಡು, ಇಲಿ(ಎಲಿ) ಹಾವು, ಎಸಂಡ್ (ಏಡಿ) ಇವ್ರುಕೆ ಮಾಳಿ, ಹುಲಿಗೆ ಗುಹೆ ಇನ್ನಿತರ ಕಾಡ್ ಪ್ರಾಣಿಗಳಿಗೆ ದೊಡ್ಡ ದೊಡ್ಡ ಮರದ ಬುಡ ಅದರೊಳಗೆ ಇರುವ ಕಾಡ್ ಕುರ್‌ಚಟೆ ಗಿಡಗ ಇನ್ ಕೆಲವು ಪ್ರಾಣಿಗಳಿಗೆ ದೊಡ್ಡ ದೊಡ್ಡ ಮರದ ಕವಟೆಗಳಲ್ಲಿ ಅಗಲವಾಗಿ ಇರುವಂತ ಅಂದರೆ ತಟ್ಟಾದ ಜಾಗ ಇದ್ದರೆ ಅದ್‌ರಲಿ ಅಥವಾ ಮರದ ಮಾಳಿಗಳಲಿ. ಹಂಗೆನೆ ಜೇನ್, ಕಡಂದ್, ಗೀಜಕ್ಕಿ, ಬೆಂಜಣ, ಇವು ಅವರದ್ದೆ ಆದ ಶೈಲಿಲಿ ಕಟ್ಟಿ ಕಂಡಂತ ಗೂಡ್‌ಗ, ಮೀನ್, ಗೊದ್ದ ಮತ್ತೆ ಕಪ್ಪೆಗ ನೀರ್‌ಲಿ ವಾಸ ಮಾಡುವವು ಸಹ ಅವರದೆ ಆದ ವಾಸಸ್ಥಳ ಒಟ್ಟಿಗೆ ಸೇರಿ ಇರುವಂತ ಜಾಗ, ಕಾಡು ಕೋಳಿ, ಕಿರ್‌ಕೋಳಿ, ನವಿಲ್, ಇವರ್ದ್ದು ಒಂದ್ ತರದ ವಾಸಸ್ಥಳ ಕುಂಡತ (ಅಳಿಲ್), ಕಾಡ್‌ಬೆಕ್ಕ್, ಪಾಂಜ (ಹಾರಬೆಕ್ಕ್) ಇವರ ವಾಸ ಸ್ಥಳಗ ಬ್ಯಾರೆ ಬ್ಯಾರೆ ರೀತಿಗ. ಆದರೂ ಸಹ ಈ ಎಲ್ಲಾ ಜೀವಿಗ ಒಟ್ಟೊಟ್ಟಾಗಿ ಜೀವಿಸುವುದೆ ಹೊರತು ಬ್ಯಾರೆ ಬ್ಯಾರೆಯಾಗಿ ಯಾರ್ ಸಹ ಜೀವನ ಸಾಗ್ಸುದ್ಲೆ. ಅಂದರೆ ಎಲ್ಲವೂ ಸಂಗಜೀವಿಗಳೆ, ಹಂಗೆನೆ ನಾವು ಸಾಕಿ ಬೆಳ್ಸುವಂತ ದನಕರ್‌ಗ, ಕತ್ತೆ ಕುದುರೆಗ, ನಾಯಿಗ, ಹಂದಿಗ ಅಲ್ಲದೆ ಕಾಡಲಿ ವಾಸ ಮಾಡುವ ಅಂದರೆ ಮಾಳಿಲಿ

ವಾಸ ಮಾಡುವ ಕುದ್ಕ (ಗುಳ್ಳೆನರಿ) ನೀರ್ ನಾಯಿ, ಪಿಜಿನ್ (ಇರುವೆ), ಗೆದ್ದಲ್, ನೌಕೆ (ಬಸವನ ಹುಳು), ಗಂಗೆ ಹುಳ, ಎರೆಹುಳ್, ಗೊದ್ದ, ಮರಂಟೆ, ಬರೆಮೀನ್ ಇವೆಲ್ಲವು ಸಹ ಸಂಗ ಜೀವಿಗಳೇ. ಇವು ಎಲ್ಲವರ ಸಂತನೋತ್ಪತ್ತಿ ಸಹ ಗಂಡ್ ಮತ್ತೆ ಹೆಣ್ಣ್‌ಗಳ ಒಂದುಗೂಡುವಿಕೆಯಿಂದ. ಹಂಗೆನೆ ಮರ ಗಿಡ ಬಳ್ಳಿ ಹೂಗಳೊಂದಿಗೆ ಗಾಳಿ ಮಳೆ ಮತ್ತೆ ದುಂಬಿ ಮತ್ತು ಜೇನು ನೊಣಗಳ ಸಹಕಾರದಿಂದ. ಸಂಗ ಜೀವನ ಕೇವಲ ಸಂತಾನೋತ್ಪತ್ತಿಗಾಗಿ ಮಾತ್ರ ಅಲ್ಲ. 1. ರಕ್ಷಣೆಗಾಗಿ 2. ಹಸಿವಿಗಾಗಿ 3. ಜೀವಿಗಳ ಹಸಿವನ್ನ ಇಂಗಿಸುವುದಕ್ಕಾಗಿ ಮತ್ತೆ ಪ್ರಕೃತಿಯಲ್ಲಿ ಹರಡುವಂತ ಸಾಂಕ್ರಾಮಿಕ ರೋಗದ ಕ್ರಿಮಿ ಕೀಟಗಳ್ನ ತಿಂದ್ ನಾಶಪಡಿಸಕ್ಕಾಗಿ ಒಟ್ಟಾರೆ ಒಂದೇ ಮಾತ್‌ಲಿ ಹೇಳ್‌ದಾದರೆ ಈ ಪ್ರಕೃತಿಯ ನಿಯಮ ಈ ಪ್ರಕೃತಿಯನ್ನ ಸಮತೋಲನವಾಗಿ ಇರಿಸಿಕ್ಕಾಗಿ, ಹಸಿರ್ ಎಲೆಗಳ, ಗಿಡ ಬೇರ್‌ಗಳ ಕಾಯಿ, ಹಣ್ಣ್, ಸೊಪ್ಪ್‌ಗಳ ಮತ್ತೆ ದಂಟ್‌ಗಳ ಆಯುರ್ವೇದ ಔಷಧಿ (ಮದ್ದ್‌ಗಳಿಗಾಗಿ) ಒಂದೊಂದು ಕಡೆಲಿ ಒಟ್ಟಿಗೆ ಬೆಳೆದು ಸಿಕ್ಕುವಂಗೆ ಮಾಡಿಟ್ಟ ಈ ಪ್ರಕೃತಿಯೇ ಸಂಗ ಜೀವನಂದ ಕೂಡಿಟ್ಟು, ಈ ಪ್ರಕೃತಿನ ಬುದ್ಧಿ ಜೀವಿಗಳಾದ ಮಾನವ ಯಾವುದೇ ಕಾರಣಂದ ಹಾಳ್ ಮಾಡಕಾಗದ್, ನಾಶ ಮಾಡಿಕಾಗದ್ ಆದರೆ ಇಂದ್ ನಾವು ಅದನ್ನ ಮಾಡ್‌ತ್ತಿಲ್ಲೆ. ನಮ್ಮನ್ನ ನಾವೇ ನಾಶಮಾಡಿಕೊಳ್ಳ್‌ತೊಳೊ. ಗಿಡನೆಟ್ಟ್, ಮರಕಾಡ್ ಬೆಳೆಸಿ, ಕಾಡ್ ಉಳಿಸಿ, ಪ್ರಾಣಿ ಪಕ್ಷಿ ಮತ್ತೆ ಜಂತುಗಳಿಗೆ ಕಾಡ್ ಬೇಕ್, ಮನ್ಸ್‌ರಿಗೆ ತಂಪಾದ ಹಸಿರಾದ ಸುಖವಾದ ತಂಪು ಗಾಳಿ ಬೇಕ್. ಇದಕ್ಕೆ ನಾವು ನೀವು ಒಟ್ಟು ಸೇರಿ ಸಹಕರಿಸಮ ಮತ್ತು ಸಂಗಜೀವಿ ಭಾಂದವ್ಯಂದ ಬೆಳ್ದ ಚಿರಾಯುವಾಗಿರಲಿ. ಒಂದ್ ಗಿಡ ಕಡ್ದರೆ ಹತ್ತ್ ಗಿಡ ನೆಟ್ಟ್ ಬೆಳೆಸಿ, ತೋಟದ ಒಳಗಿಲ್ಲದಿದ್ದರೆ ಬೇಲಿಲಿ ನೆಟ್ಟ್ ಬೆಳ್‌ಸಿ.

ಪ್ರಪಂಚ ಇದರ ನಾಶ ಇನ್ ಮುಂದೆ ಕಟ್ಟಿಟ್ಟ ಬುತ್ತಿ.

# ಜಾತಿತ್ತೇಳುವ ಬಗ್ಗೆ

ಇಂದ್ :

ಈ ಪ್ರಪಂಚಲಿ ಪ್ರಕೃತಿ ಮತ್ತೆ ಸೃಷ್ಟಿ ನಿಯಮದ ಪ್ರಕಾರ ನಾವೆಲ್ಲಾ ಇಲ್ಲಿಯವರೆಗೆ ಬೆಳ್ದ್ ಬರ್‌ತೊಳೊ. ಇದರ ನಾಶಕ್ಕೆ ನಾವೇ ಕಾರಣತ್ತೇಳಿರೆ ತಪ್ಪಲ್ಲ. ಅಂದರೆ ಅನಾದಿ ಕಾಲಂದ ನಡ್ಕಂಡ್ ಬಂದಂತ ಒಂದು ಜಾತಿ ಈ ಜಾತಿ ಪದ್ದತಿ. ಇದೇ ಮೂಲ ಇದ್ ಅಂದ್‌ಂದ ನಡ್ಕಂಡ್ ಬಂದಂತದ್. ಇಂದ್ ಅದೇ ಹೆಚ್ಚೆಚ್ಚಾಗಿ ಬೆಳೆಯುತುಟ್ಟು. ಮುಂದೆ ಒಂದು ದಿನ ಇದೆ ನಮ್ಮ ನಾಶಕ್ಕೆ ಕಾರಣ ಅದೇ ಜಾತಿ.

ಜಾತಿತ್ತೇಳಿರೆ ನನ್ನ ಅಭಿಪ್ರಾಯ

ಅಂದ್ ಬದ್‌ಕ್‌ಕ್ಕಾಗಿ ಅಥವಾ ಜೀವನ ಸಾಗಿಸಿಕ್ಕಾಗಿ ಅಥವಾ ಹಸಿವನ್ನ ಇಂಗಿಸಿಕ್ಕಾಗಿ ಅವರವರ ಮನಸಿಗೆ ಹೇಳ್‌ದಂತ ಒಂದೊಂದು ಕೆಲಸ ಕಾರ್ಯಗಳ್ನ ಮಾಡಿಕಂಬಕ್ಕೆ ಸುರು ಮಾಡ್ದೊ. ಇದ್‌ರಲಿ ಎರಡ್ ವರ್ಗ ಮಾಡಿಕೊಂಡೊ ಒಂದು ಮಾತ್ ಅಥವಾ ಭಾಷೆತ್ತೇಳ್ದ್‌ನ್ನ ರೂಪಿಸಿಕಂಡ್ ಅದರಂಗೆ ನಡ್‌ಕಂಬದ್.

ಇನ್ನೊಂದು ಮಾತ್ ಬಾರದವು ಅಂದರೆ ಅವರದ್ದೇ ಆದ ಭಾಷೆ, ಸಿಂಡ್‌ಗಳ ಮೂಲಕ ಜೀವನ ಸಾಗಿಸುವಂತದ್. ಅದ್‌ಕ್ಕಾಗಿ ಅವು ಒಂದೊಂದು ಗುಂಪು ಮಾಡಿಕಂಡ್ ಅವರದ್ದೇ ಆದ ಕೆಲಸ ಕಾರ್ಯಗಳ್ನ ನೆಡ್ಸ್‌ಕಂಡ್ ಜೀವನ ಸಾಗಿಸಿಕಂಡ್ ಹೋಗ್‌ತ್ತಿದ್ದೊ. ಅಂದರೆ ಈ ಹೊಟ್ಟೆ ಹಸಿವು ನೀಗಿಸಿಕ್ಕಾಗಿ ಅದೇ ರೀತಿ ಪ್ರಾಣಿ ಪಕ್ಷಿಗ ಸಹ ಇರ್‌ತ್ತಿದ್ದೊ. ಹುಟ್ಟಿಸಿದ ಆ ದೇವರ ಅನುಗ್ರಹದಿಂದ ಮಾತಾಡುವ ಜನತ್ತೇಳ್‌ವ ಈ ವರ್ಗದವು ಸ್ವಲ್ಪ ಮುಂದ್‌ವರ್‌ದೊ. ಹಿಂಗೆ ಮುಂದುವರಿಯಕಾಕನ ಈ ಮನುಷ್ಯ ವರ್ಗಲಿ ನಾಚಿಕೆತ್ತೇಳ್ದು ತನ್ನಿಂದ ತಾನೆ ಹುಟ್ಟಿತ್. ಆಸೆತ್ತೇಳ್ದು ಹುಟ್ಟಿತ್ ಇದರೊಟ್ಟಿಗೆ ಮೇಲ್, ಕೀಳ್, ಒಳ ಜಗಳ ದೊಟ್ಟಿಗೆ ಹೊಟ್ಟೆಕಿಚ್ಚ್‌ತಾ ಹೇಳ್ದು ಜಾಸ್ತಿ ಆಗ್ತ ಬಾತ್. ಆಗ ಅವ್ ಒಂದೊಂದು ಗುಂಪು, ಗುಂಪಿಗೊಬ್ಬ ಹಿರಿಯವ. ಆ ಹಿರಿಯವರನ ಹೇಳಿಕೆಯಂಗೆ ಆ ಗುಂಪುನ ಕೆಲಸ ಕಾರ್ಯ ನಡೆಯೋಕುತಾ ಹೇಳ್‌ವ ಮಟ್ಟಕ್ಕೆ ಮುಂದುವರ್ದೊ. ಇನ್ ಸ್ವಲ್ಪ ಮುಂದುವರಿಯಕಾಕನ ಅವ್ ಮಾಡ್‌ತಿದ್ದ ವೃತ್ತಿ ಅಂದರೆ ದಿನನಿತ್ಯದ ಕೆಲಸ ಕಾರ್ಯಗಳ್ನ ಮೂಲವಾಗಿಸಿಕಂಡ್ ಇಂತಿಂತ ವರ್ಗದವು ಇಂತಿಂತ ಕೆಲ್ಸಗಳನ್ನ ಮಾಡಕುಂತ್ತೇಳ್‌ವ ಒಂದ್ ಪದ್ಧತಿನ ಅಳವಡಿಸಿಕಂಡ್ ಬಂದೊ. ಈ ವರ್ಗವೇ ಜಾತಿಯ ಮೂಲ. ಇದ್ ಕೆಲಸ ಕಾರ್ಯಗಳಿಂದ ಬಂದದ್ದೇ ಹೊರತ್ ಮೂಲತಾ: ನಾವ್ ಎಲ್ಲಾ ಮನುಷ್ಯ ವರ್ಗದವ್ ನಾವೆಲ್ಲಾ ಒಂದೆ.

**ಇಂದ್:**

ಈ ಮುಂದ್‌ವರೆದ ಜನಾಂಗದ ವೃತ್ತಿಪರ ಗುಂಪು ನಾವ್. ಅವರದ್ದೇ ಆದ ಒಂದ್ ಗುಂಪ್‌ಗಳ್ನ ಬೇರ್ಪಡಿಸಿಕಂಡ್ ಅವರದ್ದೇ ಆದ ಒಂದ್ ಗುರುಗಳ್ನ ಆರಿಸಿಕಂಡ್ ಈ ಗುರುವಿಗೆ ಎಲ್ಲಾ ಅಧಿಕಾರನ ಕೊಟ್ಟ್ ಅವು ಹೇಳ್ದಂಗೆ ನಡೆಯಕು. ಅವು ಹೇಳ್ದೆ

ವೇದ ವಾಕ್ಯ. ಅದರ ಬಗ್ಗೆ ಬ್ಯಾರೆ ಯಾರ್ ಮಾತಾಡಿಕೆ ಬೊತ್ತು. ಇದ್‌ಕೆ ಸಂಬಂಧಿಸಿದಂಗೆ ಅವರದ್ದೇ ಆದ ಒಂದು ದೇವರು ಅಥವಾ ದೇವಿ ಅದನ್ನ ಪೂಜಿಸುವ ವಿಧಾನ ಹಂಗೆನೆ ಈ ದೇವರ್‍ನ ಇಂತಿಂತ ವರ್ಗದವು ಮಾತ್ರ ಗುಡಿಯೊಳಗೆ ಪೂಜಿಸಕು ಉಳಿದವು ಅವರ ಅವರ ನಾಮಗಳ್ನ ಹೇಳಿಕಂಡ್ ಅವರವರ ಮನೆಲಿ ಪೂಜಿಸಿಕಣಿತ್ತೇಳುವ ಮಟ್ಟಕ್ಕೆ ಮುಂದುವರ್ದೋ. ಜನರಲ್ಲಿ ಹೆದರಿಕೆ ಹುಟ್ಟಿಸುವಂತ ಪವಾಡಗಳ್ನ ಮಾಡಿಕೆ ಕಲ್ತ್‌ಕಂಡ್ ಅವರದ್ದೆ ಆದ ಒಂದ್ ಪಂಗಡ ಮಾಡಿಕಂಡ್ ಆ ಪಂಗಡವು ಹೆಂಗಿರಕು. ಹೆಂಗೆ ವರ್ತಿಸಕು, ಹೆಂಗೆ ಜನರ ಮನ್ಸ್‌ನ ಒಲಿಸ್‌ಕಂಡ್ ಮುಂದುವರಿಯೋಕುತ್ತೇಳ್ದನ್ನ ಅವರ ಪಂಗಡವುಕೆ ಮಾತ್ರ ಕಲಿಸಿ ಕೊಡುತ್ತಿದ್ದೊ, ಆದರೆ ನಾವೆಲ್ಲಾ ಆ ಮಹಾವಿಷ್ಣು (ಕೃಷ್ಣ ಪರಮಾತ್ಮ ಮತ್ತೆ ಆದಿಶಕ್ತಿ ರಾಜರಾಜೇಶ್ವರಿಯ ಮಕ್ಕ) ತ್ತೇಳ್ದನ್ನ ಪೂರ್ತಿಯಾಗಿ ಕೈಬಿಟ್ಟ್, ಜಾತಿ, ಜಾತಿಲಿ– ಮೇಲ್ಜಾತಿ, ಕೀಳ್‌ಜಾತಿ, ಮಡಿ ಸೂತಕ ಮತ್ತೆ ಅದರ ಶುದ್ಧೀಕರಣ ಪಾಪ ಮತ್ತೆ ಪುಣ್ಯ ಮತ್ತೆ ಇದರ ಕಟ್‌ಪಾಡ್‌ಗಳ್ನ ರೂಪಿಸಿಕಂಡ್ ಜೀವನ ಸಾಗಿಸುವ ಪಂಗಡದವು ಈಗೀಗ ಕಮ್ಮಿಯಾಗುತ್ತ ಬರುತ್ತಳೊ ಕಾರಣ ಇಷ್ಟೆ. ಈಗ ವಿಜ್ಞಾನದ ಯುಗ. ಪ್ರತಿಯೊಂದು ಜೀವಿಗ ಸಹ ಮುಂದುವರಿದಳೊ ಮುಂದುವರಿಯುತ್ತಾ ಹೋಗುತ್ತೊಳೊ ಆದರೆ, ಈಗೀಗ ಬುದ್ದಿವಂತ ರಾದ ಮನುಷ್ಯ ವರ್ಗದವರಾದ ನಾವು ಈ ಜಾತಿತ್ತೇಳ್ದನ್ನ ಹಂತ ಹಂತವಾಗಿ ಕೈ ಬಿಡ್ತೊಳೊ. ಹೊಂದಿ ಬಾಳ್ತೊಳೊ. ಜೊತೆಗೆ ಅಲ್ಲಲ್ಲಿ ದೇವಸ್ಥಾನಗಳ್ನ ಕಟ್ಟಿಸಿ ಊರು ಒಗ್ಗಟ್ಟಾಗತ್ತೊಳೊ. ಪುರಾಣಗಳ ವಿಷಯ ತಿಳ್ಕಂಡ್ ಅವು ಅಂದ್‌ಂದ ಇಂದ್‌ಮುಟ್ಟ ಪಟ್ಟ ಕಷ್ಟಗಳ್ನ ಗ್ಯಾನ ಮಾಡಿಕಂಡ್ ಆದಷ್ಟ್ ಮಟ್ಟಿಗೆ ತಮ್ಮನ ತಾವೆ ತಿದ್ದಿಕೊಳ್ತ್ತೊಳ್ಳೊ.

**ಇನ್ಮುಂದೆ :**

ಇನ್ಮುಂದೆ ಅದೊಂದ್ ದಿನ ಈಗಿರುವಂತ ಬುದ್ದಿ ಜೀವಿ

ಗಳ ಉತ್ತರಾಧಿಕಾರಿಗಳಿಗೆ ಪುರಾಣದ ಮತ್ತು ಈಗಿನ ಪ್ರಪಂಚದ ಯಾವುದೇ ಕುರುಹು ಅಂದರೆ ಮೂಲ ಸ್ವರೂಪದ ಗುರುತು ಸಿಕ್ಕುದುಲೆ. ಕಾರಣ ಈ ಪ್ರಕೃತಿತ್ತೇಳ್ದು ವಿಚಿತ್ರ ರೂಪ ತಾಳ್ದೆ, ಕಾಡ್, ಮರಗಿಡಗ, ಹೊಟ್ಟೆಗೆ ಅನ್ನ ಇಲ್ಲದೆ ನಾನಾ ತರದ ಕಾಯಿಲೆಗ, ಕುಡಿಯಕೆ ನೀರಿಲ್ಲದೆ, ಯಾವ ಜೀವಿಗಳಲ್ಲಿ ಉತ್ಸಾಹ ಇರುದುಲ್ಲೆ, ಮನಸ್ಸು ಹಿಡಿತ್ತಲಿ ಇರ್‌ದುಲ್ಲೆ, ಜನನಕ್ಕಿಂತ ಮರಣ ಜಾಸ್ತಿ ಆದೆ, ಅಂದರೆ ಹುಟ್ಟಿಗ್ಗಿಂತ ಸಾವು ಜಾಸ್ತಿ ಆದೆ, ಈ ಪ್ರಕೃತಿ ನಮಗೆ ಕೊಟ್ಟಂತ ಮೂಲ ಸ್ವರೂಪದ ಅನುದಾನನ ನಾವು ವಿಜ್ಞಾನತ್ತೇಳುವ ಮುಂದುವರಿಕೆಗಳಿಂದಾಗಿ ಪೂರ್ತಿ ನಾಶ ಮಾಡಿಕೊಂಡವೆ. ಅಲ್ಲಿಗೆ ಕಲಿಯುಗ ಅಂತ್ಯವಾದೆ.

ಮುಂದೆ ಸತ್ಯಯುಗ ಮೊದಲ್‌ನಂಗೆ (ಹಿಂದಿನಂಗೆ) ಸುರಾದೆ. ಶ್ರೀ ಕೃಷ್ಣ ಪರಮಾತ್ಮ ಮತ್ತೆ ಆಧಿಶಕ್ತಿ ರಾಜರಾಜೇಶ್ವರಿ ಈ ಭೂಮಿಲಿ ಪ್ರತ್ಯಕ್ಷವಾಗಿ ಈ ಪ್ರಕೃತಿನ ಮರು ಸೃಷ್ಟಿ ಮಾಡಿವೆ. ಆಗ ಬದುಕುಳಿದ ಜನ ದೇವರ ಮೊರೆ ಹೋದವೆ. ಕೃಷ್ಣ ಪರಮಾತ್ಮನ ಮತ್ತೆ ಆದಿಶಕ್ತಿ ರಾಜರಾಜೇಶ್ವರಿನ ಬೇಡಿಕೊಂಡವೆ. ಅದೆಂಗೆ ತ್ತೇಳಿರೆ ನೀವು ನಮ್ಮನ್ನೆಲ್ಲಾ ಬುಟ್ಟ್ ದೂರ, ದೂರ ಅತೀ ದೂರಕ್ಕೆ ಹೋಗಿ ನಿಂತೊಳರಿ ನೀವು ಮತ್ತೋಮ್ಮೆ ಈ ಭೂಮಿಗೆ ಬಂದ್ ನಮ್ಮೊಟ್ಟಿಗಿದ್ದ್ ನಮ್ಮೆಲ್ಲರ್‌ನ ಭಕ್ತರಾಗಿ ಸೇರಿಸಿಕಂಡ್ ರಕ್ಷಣೆ ಮಾಡೊಕು.

## ಹಾಡ್ ಅದೆಂಗೆತ್ತೇಳಿರೆ ಹಾಡ್

ಏಳ್ ಬೆಳಗಾತ್ ಕೋಳಿ ಕೂಂಗಿತ್ ಏಳ್ ಮಹಾವಿಷ್ಣು ಸ್ವಾಮಿ।
ನಮ್ಮ ಆತ್ಮಲಿ ನೆಲೆನಿಂತ ಮಹಾವಿಷ್ಣು ಸ್ವಾಮೀ ॥
ಆದಿಶೇಷನ ಮೇಲೆ ಮಲಗಿದ್ದ ಮಹಾವಿಷ್ಣು ಸ್ವಾಮೀ।
ಏಳ್ ಬೆಳಗಾತ್ ಕೋಳಿ ಕೂಂಗಿತ್ ಏಳ್ ಮಹಾವಿಷ್ಣು ಸ್ವಾಮಿ॥

ಬೆಳಕಾಗಿ ನಿನ್ನಲ್ಲಿಗೆ ರಾಜರಾಜಶ್ವೇರಿ ಬಾತ್ ಮಹಾವಿಷ್ಣು ಸ್ವಾಮಿ।
ದೂರ ದೃಷ್ಟಿಯನ್ನಿಟ್ಟ್ ಭೂ ತಾಯಿ ಸೃಷ್ಟಿಸಿತ್ ಈ ಭೂಮಿನ
ಮಹಾವಿಷ್ಣು ಸ್ವಾಮಿ।
ಭೂ ತಾಯಿಯ ಕೈಗೆ ನೀಕೊಟ್ಟ ಸಕಲ ಜೀವಿಗಳ ಬೀಜನ
ಮಹಾವಿಷ್ಣು ಸ್ವಾಮಿ।
ಎಳ್ ಬೆಳಗಾತ್ ಕೋಳಿ ಕೂಂಗಿತ್ ಏಳ್ ಮಹಾವಿಷ್ಣು ಸ್ವಾಮಿ॥

ಭೂ ತಾಯಿ ಬಿತ್ತಿತ್ ಈ ಬೀಜನ ಭೂಮಿಲಿ ಮಹಾವಿಷ್ಣು ಸ್ವಾಮಿ।
ಎದ್ ನಿಂತತ್ ಬೆಟ್ಟ ಕಲ್ ಬಂಡೆ ಮರಗಿಡಗ ಮಹಾವಿಷ್ಣು ಸ್ವಾಮಿ।
ಏಳ್ ಬೆಳಗಾತ್ ಕೋಳಿ ಕೂಂಗಿತ್ ಏಳ್ ಮಹಾವಿಷ್ಣು ಸ್ವಾಮಿ।
ಹುಟ್ಟಿದೊ ಮನುಷ್ಯ, ಮೃಗ ಪಕ್ಷಿಗ, ಜಲಮೂಲಗ,
ಗಂಡ್ ಹೆಣ್ಣ್‌ಗಳಾಗಿ ಮಹಾವಿಷ್ಣು ಸ್ವಾಮಿ॥

ಸ್ವಾಮಿ ಆದಿ ಕೃಷ್ಣನೆ ನೀ ಆದಿಶಕ್ತಿಯ ಗಂಡನಾದೆ ಮಹಾವಿಷ್ಣು ಸ್ವಾಮಿ।
ಏಳ್ ಬೆಳಗಾತ್ ಕೋಳಿ ಕೂಂಗಿತ್ ಏಳ್ ಮಹಾವಿಷ್ಣು ಸ್ವಾಮಿ।
ಅಂದ್‌ನ ಸೃಷ್ಟಿಕರ್ತನ ಮರ್‌ತ್ ನಾವು ಮೆರೆದೋ ಮಹಾವಿಷ್ಣು ಸ್ವಾಮೀ।
ಇಂದ್ ನಾವು ವಿನಾಸದ ಹಾದಿಲೊಳೊ. ಮಹಾವಿಷ್ಣು ಸ್ವಾಮಿ॥

ಎದ್ದ್ ಬಂದ್ ನಮ್ಮನ ರಕ್ಷಣೆ ಮಾಡ್ ಮಹಾವಿಷ್ಣು ಸ್ವಾಮಿ।
ಏಳ್ ಬೆಳಗಾತ್ ಕೋಳಿ ಕೂಂಗಿತ್ ಏಳ್ ಮಹಾವಿಷ್ಣು ಸ್ವಾಮಿ।
ಏಳ್ ಬೆಳಗಾತ್ ಕೋಳಿ ಕೂಂಗಿತ್ ಏಳ್ ಮಹಾವಿಷ್ಣು ಸ್ವಾಮಿ।
ಏಳ್ ಬೆಳಗಾತ್ ಕೋಳಿ ಕೂಂಗಿತ್ ಏಳ್ ಮಹಾವಿಷ್ಣು ಸ್ವಾಮಿ॥

* * * * *

# ಸ್ವಾಮಿ ಮತ್ತೆ ಆದಿಶಕ್ತಿಯ ಮಹಿಮೆ

ಅಂದ್ ಬ್ರಹ್ಮ, ವಿಷ್ಣು, ಮಹೇಶ್ವರ ಇವು ಮುಂದಿನ ಉಸ್ತುವಾರಿ ಮತ್ತೆ ಲಾಲನೆ ಪಾಲನೆಗಾಗಿ ದೇವ ಮಾನವರನ್ನ ಸೃಷ್ಠಿ ಮಾಡಿಕಂಡವೆ. ಈ ದೇವಮಾನವ ಅಂದರೆ ಇಬ್ಬರು ಸ್ವಂತ ಅಕ್ಕ ತಂಗೆಗ ಹುಟ್ಟಿವೆ. ಅಕ್ಕನ ಮಕ್ಕ ದೇವಮಾನರಾದವೆ. ಹಂಗೆನೆ ತಂಗೆಯ ಮಕ್ಕ ರಾಕ್ಷಸ ಮಾನವರಾದವೆ. ಇವಿಬ್ಬರು ಮಾನವರ ಮಕ್ಕಳಾದರು ಸಹ ಅವರ ನೀತಿ ಮತ್ತೆ ನಡತೆ ಮಾತ್ರ ಬ್ಯಾರೆ ಬ್ಯಾರೆ. ದೇವ ಮಾನವಕ್ಕೂ, ರಾಕ್ಷಸರಿಗೂ ಆಗಾಗ ಒಳ ಜಗಳ ಹಂಗೆನೆ ಯುದ್ಧ ಆಗ್‌ತ್ತಿತ್. ಈ ರಾಕ್ಷಸರ ನಿರ್ಮೂಲನೆಗಾಗಿ ಆದಿಶಕ್ತಿ ರಾಜರಾಜೇಶ್ವರಿಯಾಗಿ ಅವತಾರ ಎತ್ತಿ ರಾಕ್ಷಸರ ಸಂಹಾರ ಮಾಡ್ದೆ. ಆದಿ ಕೃಷ್ಣ ಪರಮಾತ್ಮ ವಿಷ್ಣು ರೂಪ ತಾಳಿ ಭಕ್ತಧ್ರುವನ ರಕ್ಷಣೆ ಮಾಡ್ದೆ. ಶ್ರೀ ರಾಮಚಂದ್ರನಾಗಿ ದುಷ್ಟ ರಾವಣನ ಕೊಂದದೆ. ಮತ್ತೆ ಶ್ರೀ ಕೃಷ್ಣ ಅವತಾರ ತಾಳಿ ದ್ವಾಪರಯುಗಲಿ ಕೌರವರ್ನ ನಾಶ ಮಾಡ್ದೆ. ಅಂದರೆ ಅಲ್ಲಿಗೆ ದ್ವಾಪರಯುಗ ಮುಗ್‌ದದೆ.

ಶ್ರೀ ಕೃಷ್ಣ ಪರಮಾತ್ಮನೆ ತಿರುಪತಿ ವೆಂಕಟೇಶ್ವರ ಸ್ವಾಮಿ ಈ ಕಲಿಯುಗದ ದೇವರು.

# ಶ್ರೀ ಕೃಷ್ಣ ತಿರುಪತಿ

**ಇಂದ್:**

ಇಂದ್ ನಾವೆಲ್ಲ ನಮ್ಮ ಕುಲದೇವರಾಗಿ ಮನೆ ದೇವರಾಗಿ ಪೂಜಿಸುತ್ತಿರ್ದು ತಿರುಪತಿ ವೆಂಕಟೇಶ್ವರ ಸ್ವಾಮಿನ. ಈ ಸ್ವಾಮಿಯ ಮೂಲ ಭಕ್ತರ್ ದಾಸರ್ ಮತ್ತೆ ಗೌಡರ್ ಇದ್ ಹೆಂಗೆ.

ಹೆಂಗೆತ್ತೇಳಿರೆ ಹಿಂದೆ ಜಾತಿ ಪದ್ಧತಿನ ಮಾಡಿಕಂಡ್ ಒಂದೊಂದ್ ಗುರುಗಳ್ನ ಮಾಡಿಕಂಡ್ ಇಂದ್ ಮುಟ್ಟ ಅದನ್ನೆ ಅನುಸರಿಸಿಕೊಂಡ್ ಬರುತ್ತಿರುದರ್‌ಂದ

ಈ ದ್ವಾಪರಯುಗದ ಅಂತ್ಯಲಿ, ಜಾತಿಗಳ್ನ ಎತ್ತಿ ಹಿಡ್ದವೆ. 1. ಆರ್ಯಕುಲ 2. ರಾಕ್ಷಸರ ಕುಲ 3. ಬ್ರಾಹ್ಮಣರ (ದ್ರೋಣಾ ಚಾರ್ಯರ ಕುಲ) 4. ಸೂತಕುಲ 5. ವೈಸ, ಕುಲ ಹಂಗೇನೆ ಮಾದ್ರಿ, ಗಾಂದಾರಿ. ಹಿಂಗೆ ಅಲ್ಲಲ್ಲಿ ನೂರಾರ್ ರಾಜರ್‌ಗ, ಆ ರಾಜ್ಯಲಿದ್ದ ಪ್ರಜೆಗ ಅಲ್ಲಿದ್ದ ಕುಟುಂಬಸ್ಥರ್ ಒಂದೊಂದು ಕುಲ ಅವರ ಆಚಾರ ವಿಚಾರಗಳ್ನ ಮುಂದುವರ್ಸಿಕಂಡ್ ಬಂದೊ. ಅವು ಅವರದ್ದೇ ಆದ ಆಚಾರ ವಿಚಾರ ಹಂಗೇನೆ ದೇವಮಾನವ ಗಣಗಳ್ನ ಪೂಜಿಸುವ ಕ್ರಮಗಳ್ನ ಅವರದ್ದೆ ಆದ ರೀತಿ ನೀತಿ ಶೈಲಿಗಳಲ್ಲಿ ಅಭ್ಯಾಸ ಮಾಡಿಕೊಂಡು ಬರ್‌ತ್ತಿದ್ದೊ. ಕಾಲಕಳ್ದಂಗೆ ಇದೇ ಒಂದು

ವಾದ ವಿವಾದಗಳಾಗಿ ಬೆಳೆಯಕೆ ಸುರಾತ್. ಒಳಜಗಳ ಸುರಾತ್. ಒಂದು ಜಾತಿಯನ್ನ ಇನ್ನೊಂದು ಜಾತಿಯವರನ್ನ ನಿಂದನೆ ಮಾಡಿಕೆ ಸುರು ಮಾಡ್ದೊ, ಕೀಳ್ ಮೇಲ್ತ್ತೇಳುವ ಭಾವನೆಗ ಸುರಾತ್. ಅಂತಾ ಸಮಯಲಿ ಒಂದು ಗುಂಪುನವು ಒಂದೊಂದು ದೇವರ್‌ಗಳ ಆರಿಸಿಕಂಡ್ ಪೂಜಿಸೊಕ್ಕೆ ಸುರು ಮಾಡ್ದೊ. ಅದಕ್ಕೆ ಸಂಬಂಧಿಸಿ ದಂಗೆ ಅವರ್‌ದೆ ಆದ ಆಚಾರ ವಿಚಾರ ಸುರ್ ಮಾಡಿಕಂಡೊ. ಇದ್ ಯಾರ್ ಹೇಳಿಕೊಟ್ಟದಲ್ಲ. ಇದ್ ಒಂದು ಪದ್ದತಿ ಅಥವಾ ನಡ್ಪು ಇದನ್ನ ನಾವು ಪಾಲಿಸಿಕಂಡ್ ಬಂದೊ. ಇದಕ್ಕೆ ಲಿಪಿ ಇಲ್ಲೆ, ಅಕ್ಷರ ಇಲ್ಲೆ. ಇದರ ಬಗ್ಗೆ ಬರ್ದ್‌ದ್ ಸಹ ಸಿಗುದುಲೆ.

* * * * *

# ಗೌಡತ್ತೇಳುದು ಒಂದು ವರ್ಗ

## ಅವರ ನಡ್‌ಪು

**ಅಂದ್ :**

ಅಂದ್ ಈ ಗೌಡಂತೇಳುದು ಒಂದು ಜಾತಿ ಖಂಡಿತಾ ಅಲ್ಲ. ಇದ್ ಒಂದು ವರ್ಗ ಅಥವಾ ಒಂದು ವರ್ಗದವರ ಹೆಗ್ಗುರುತು ಅಥವಾ ಅಂದ್‌ನ ಕಾಲಲಿ ಕೊಟ್ಟಂತ ಬಿರುದು ಕಾರಣ. ಬಹಳಷ್ಟು ಜಾತಿ ಅಥವಾ ಪಂಗಡಲಿ ಗೌಡರ್‌ಂತೇಳುವವು ಒಳೊ. ಇದನ್ನೆ ಇನ್ನೊಂದು ವರ್ಗದವು ಒಂದು ಮುಖ್ಯ ಮನೆತನದವು, ಗೌಡ ಮನೆತನದವುತ್ತೇಳಿಕಂಡ್ ಆ ಕುಟುಂಬಸ್ಥರಿಗೆ ಒಂದು ಉತ್ತಮ ರೀತಿಲಿ ಗೌರವಗಳ್ನ ಕೊಡುವಂತ ಪದ್ದತಿನ ಮಾಡಿ ಕೊಂಡು ಬಂದೊಳೊ. ಈ ಗೌಡರ ಹೇಳಿಕೆಗೆ ಗೌರವ ಕೊಟ್ಟ್ ಅವು ಹೇಳ್ದಂಗೆ ನಡ್‌ಕಂಡ್ ಹೋಗ್‌ತ್ತಿತ್ತ್. ಈ ಗೌಡರಿಗೆ ಅಂದ್‌ನ ಕಾಲದ ವಿಶೇಷ ಗೌರವ ತ್ತೇಳಿರೆ ಎಲ್ಲವು ಸೇರುವಂತ ಮದುವೆ, ಹಬ್ಬ, ಸಭೆ ಸಮಾರಂಭಗಳಲ್ಲಿ ಆ ಸಮಾರಂಭಗಳ್ನ ನಡ್ಸುವ ಕುಟುಂಬಸ್ಥರ ಹಿರಿಯವ ಅಥವಾ ಆ ಕುಟುಂಬದ ಪಟ್ಟೆದಾರ ತ್ತೇಳುವ ವ್ಯಕ್ತಿ ಒಂದ್ ಚೊಂಬು ನೀರ್ ಒಂದು ಎಲೆತಟ್ಟೇಲಿ ವೀಳ್ಯದೆಲೆ ಅಡಿಕೆ ಇಟ್ಟ್ ಸುರ್‌ಗೆ ಅವರ್ನ ಗೌರವಿಸಿ ನಂತರ ಆ ಊರ್ ಮತ್ತೆ ಬಂಧು ಬಳಗದವರ್ನ ಕರ್ದ್ ನಾವ್ ಮಾಡ್‌ವ ಈ ಕಾರ್ಬಾರ್‌ಗಳ್ನ ನಮ್ಮ ಪೂರ್ವ ಪದ್ದತಿ ಪ್ರಕಾರ ನಡ್ಸಿ ಕೊಡೋಕುತ್ತೇಳಿಕಂಡ್ ಕಾರ್‌ಬಾರ್ ಸುರ್‌ಮಾಡ್ವೆ. ಹಂಗೆನೆ ಕೆಲವು ಶುಭ ಕಾರ್ಯಕ್ರಮಗಳಲ್ಲಿ ಭಾಗವಹಿಸಿಕೆ ಇಂತಾ ಕುಟುಂಬಸ್ಥರ್ ಇಂತಹ ಕುಟುಂಬಸ್ಥರಿಗೆ ಸಹಕರಿಸಕುತ್ತೇಳ್‌ವ ನಿಯಮಗಳ್ನ ಸಹ ಮಾಡಿಕೊಂಡಳೋ. ಇದನ ಕೊಡ್‌ಗನ ಪದ್ದತಿ ಪ್ರಕಾರ ಅರುವಂಗತ್ತೇಳಿ ಕರಿತ್ತೊಳೊ ಊರು ದೇವರ

ಕಾರ್‌ಬಾರ್‌ಗಳಲ್ಲಿ ಸೂತ್‌ಗದ ಕುಳ ಅಥವಾ ಮನೆತನದವ್ಕೆ ಈ ಅರುವಂಗ ಸಹಕರಿಸಿ ಅವರ ಪೂರ್ತಿ ಕೆಲಸ ಕಾರ್ಯ ಕ್ರಮಗಳ್ನ ಈ ಅರ್‌ವಂಗ ಮಾಡಿಕೊಡಕೂ, ಇದ್ ಅಂದ್ ಇಟ್ಟ್‌ಕಂಡ ಪದ್ಧತಿ ಇಂದ್‌ಮುಟ್ಟ ನಡ್‌ಕಂಡ್ ಬರ್‌ತುಟ್ಟು.

ಈಗ ಕೊಡಗು ಮತ್ತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಗೌಡರ ಬಗ್ಗೆ ಸ್ವಲ್ಪ ತಿಳ್‌ಕಂಬನೋ. ಈ ಗೌಡರ್ ಅನಾದಿ ಕಾಲಂದ ಎಲ್ಲಿಂದ ಬಂದಳೋತ್ತೇಳುವ ಮಾಹಿತಿ ಸಿಕ್ಕುದುಲೆ, ಇದಕ್ಕೆ ಆಧಾರಗ ಸಹ ಇಲ್ಲೆ. ಅಂದರೆ ನಡೆಪು ಅಥವಾ ಪದ್ದತಿ ಮತ್ತೆ ದೇವರ ಪೂಜೆ ಪುರಸ್ಕಾರ ಮನೆ ದೇವರ್ ಅಥವಾ ಕುಲದೇವರ ಆಧಾರದ್ ಮೇಲೆ ಇದನ್ನ ಬರೆಯುತೊಳೆ.

ಈ ಗೌಡರ ಮೂಲದೇವರು ತಿರುಪತಿ ವೆಂಕಟರಮಣ ಸ್ವಾಮಿ ಮತ್ತೆ ಲಕ್ಷ್ಮಿದೇವಿ. ಇವರನ್ನ ಪುರಾತನ ಕಾಲಂದ ಪೂಜಿಸಿಕಂಡ್ ಬಂದಂತದ್. ಇದ್ ಇನ್ನ್ ಮುಂದಕ್ಕೆ ಸಹ ನಡ್ಸ್‌ಕಂಡ್ ಹೋದವೆತ್ತೇಳುವ ದೃಢ ಮನ್ಸ್ ನನ್ನದ್. ನಾವು ಮೂಲತ ಪರಮಾತ್ಮ ಮೂಲ ಕುಲವಾದ ಯಧು ವಂಶದವು. ಹರಿಯೇ ನಮ್ಮ ದೇವರು ಆ ಹರಿಯೇ ದ್ವಾಪರಯುಗಲಿ ಕೃಷ್ಣ. ಈ ಕೃಷ್ಣ ಕುಲ ಯಾಧವ ಕುಲ, ಆ ಕೃಷ್ಣನೇ ಕಲಿಯುಗದಲ್ಲಿ ತಿರುಪತಿಯಲ್ಲಿ ಶ್ರೀ ವೆಂಕಟೇಶ್ವರ ಆಗಿದ್ದದೆ. ಆ ಶ್ರೀ ಲಕ್ಷ್ಮೀ ವೆಂಕಟೇಶ್ವರನೇ ನಮ್ಮ ಕುಲದೇವರು. ವಂಶಪಾರಂಪರೆಯಾಗಿ ಬಂದದ್ ಅದನ್ನ ಅಂದ್‌ಂದ ಇಂದ್‌ಮುಟ್ಟ ಇನ್ನ್ ಮುಂದೆ ಸಹ ಆಚರಿಸಿಕಂಡ್ ಹೋದವೆ.

ಈಗ ಕೊಡ್‌ಗನ ಸುಮಾರ್ ಅರ್ಧಭಾಗಲಿ ಅಂದರೆ ಉತ್ತರ ಕೊಡಗ್ ಭಾಗಲಿ ವಾಸ ಮಾಡಿಕೊಂಡ್ ಇರುವಂತಹ ಗೌಡರ ಪೈಕಿ ಅರ್ಧ ಭಾಗದ ಗೌಡ ಕುಟುಂಬಸ್ಥರಿಗೆ ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದ ಸುಳ್ಯ , ಸುಬ್ರಮಣ್ಯ , ಪುತ್ತೂರು

ಹಂಗೆನೆ ಮಂಗಳೂರು ವಿಭಾಗಲಿ ಮೂಲ ಮನೆಗಳನ್ನ ಇಟ್ಟಕಂಡ್ ಅಲ್ಲಿ ನಡೆಯುವ ದೇವತಾ ಕಾರ್ಯ ಕ್ರಮಗಳಿಗೆ ಎರಿಗೆ ತೆರಿಗೆ ಕೊಡುವಂತಹ ಪದ್ದತಿನ ಇಟ್ಟ್‌ಕಂಡೊಳೋ. ಹಂಗೆನೆ ಕೆಲವು ಕಟ್ಟ್ ಪಾಡ್‌ಗಳ್ನ, ಸೂತ್‌ಗ ಸಹ ಇಟ್ಟಕಂಡ ಅದರಂಗೆ ನಡ್‌ಕಂಡ್ ಬರುತ್ತೊಳೊ. ಅಂದರೆ ಈ ಮೂಲದ ಮೂಲ ಕುಟುಂಬಸ್ಥರ್ ವಿಜಯನಗರದ ಕೃಷ್ಣ ದೇವರಾಯನ ಕಾಲಲಿ ಅಲ್ಲಿ ಇದ್ದ್ ಶ್ರೀ ವಿಷ್ಣು ಮತ್ತು ವೆಂಕಟರಮಣ ದೇವರ ಭಕ್ತರಾಗಿ ಈ ದೇವರು ಅಂದ್‌ನ ಕಾಲಲಿ ವಂಶ ಪಾರಂಪರಿಯಾಗಿ ಬಂದ ದೇವರ್‌ತ್ತೇಳಿ ಶ್ರೀ ವಿಷ್ಣು ದೇವರ ಆರಾಧಿಸಿಕಂಡ್ ಶ್ರೀ ವೆಂಕಟರಮಣ ಮತ್ತೆ ಶ್ರೀ ಲಕ್ಷ್ಮೀ ದೇವಿನ ಕುಲ ದೇವರಾಗಿ ಆರಾದಿಸಿಕಂಡ್ ಬರ್‌ತೊಳೊ. ಅಂದರೆ ಅನಾದಿ ಕಾಲಂದ ವಿಷ್ಣು ಭಕ್ತರೆ ಆಗಿದ್ ತ್ರೇತಾಯುಗಲಿ ಶ್ರೀ ರಾಮ ಮತ್ತೆ ಆಂಜನೇಯ ಭಕ್ತರಾಗಿದ್ದ್, ದ್ವಾಪರಲಿ ಶ್ರೀ ಕೃಷ್ಣನ ಭಕ್ತರಾಗಿದ್ದ್ ದ್ವಾಪರಯುಗ ಮುಗ್‌ದಂಗೆ ಸುರಾದ ಕಲಿಯುಗಲಿ ಅದೇ ಶ್ರೀ ಕೃಷ್ಣ ಪರಮಾತ್ಮನೆ ಶ್ರೀ ವೆಂಕಟೇಶ್ವರ ಹಂಗೆನೆ ಲಕ್ಷ್ಮೀ ದೇವಿಯ ಅವತಾರದ ವೇದಾವತಿ ಮಾಯಸೀತಾದೇವಿ ಇಲ್ಲಿ ಪದ್ಮಾವತಿಯಾಗಿ ಅವತರಿಸಿದೆ. ಸ್ವಾಮಿಯ ಮದುವೆ ಆದೆ. ಅವರ ಭಕ್ತರ್ ಅಂದರೆ ದಾಸ ಮತ್ತೆ ಗೌಡರ್ ಸೇರಿಕೊಂಡ್ ಹರಿಸೇವೆ ಮಾಡ್‌ತೊಳೊ. ಹರಿಸೇವೆತ್ತೇಳಿರೆ ಸ್ವಾಮಿಯ ಮದುವೆತ್ತೇಳುವಂತ ಮೂಲ ಅರ್ಥ. ಅದ್‌ಕ್ಕಾಗಿ ಈ ಗೌಡ ಕುಟುಂಬಸ್ಥರ್ ವಾಸ ಮಾಡ್‌ತ್ತಿದ್ದ ಮೂಲ ಮನೆ ಅಥವಾ ಐನ್‌ಮನೆಲಿ ಅಟ್ಟದ ಮೇಲೆ ಸ್ವಾಮಿಯ ಹೆಸರ್‌ಲಿ ಮುಡ್‌ಪ್ ಕಟ್ಟಿ ಇಡುವಂತ ಅನಾದಿ ಕಾಲದ ಪದ್ದತಿನ. ಇಂದಿನವರೆಗೆ ಆಚರಿಸಿಕಂಡ್ ಬರ್‌ತೊಳೊ.

* * * * *

# ಐನ್ ಮನೆ

ಐನ್ ಮನೆತ್ತೇಳಿರೆ ಅಂದ್ ಇಲ್ಲಿಗೆ ಬಂದ್ ಇಲ್ಲಿ ಜಮ್ಮಾ ಉಂಬಳಿ ರಾಜರಿಂದ ಪಡ್ದ್ ಜೀವನ ಸಾಗಿಸಿಕೆ ಸುರು ಮಾಡ್‌ಕಾಕನ ಅವರವರ ವಾಸಕ್ಕಾಗಿ ಕಟ್ಟಿಕಂಡ ಮನೆ. ಆ ಮನೆತ್ತೇಳಿರೆ ಇಂದಿಗೆ ಸಹ ದೇವಸ್ಥಾನದ ನೀತಿ ನೆಡಪು ಕಟ್ ಕಟ್ಟಳೆಗಳನ್ನು ಅನುಸರಿಸಿಕಂಡ್ ನಡ್‌ಸಿಕಂಡ್ ಬರುತ್ತಿರುವಂತ ಆದಿ ನೆಲೆ ಇದರಲ್ಲಿ ಆ ಕುಟುಂಬದ ಮೂಲ ವ್ಯಕ್ತಿ ಪೂಜಿಸಿಕಂಡ್ ಬರುವಂತಹ ಕುಟುಂಬದ ಕುಲದೇವರಾದ ಸ್ವಾಮಿ ವೆಂಕಟ ರಮಣ ದೇವರ ಮುಡ್‌ಪ್‌ನೊಟ್ಟಿಗೆ ಅದೇ ವ್ಯಕ್ತಿ ಪೂಜಿಸಿಕಂಡ್ ಬರುತ್ತಿದ್ದಂತಹ ಅಂದರೆ ಕೊಟ್ಟ್ ಕೊಂಡಾಡುವಂತ ದೇವರ ಅಂದರೆ ಪಾಸಾಣಮೂರ್ತಿ (ಸತ್ಯದೇವತೆ) ಪಂಜಿರುಳಿ ಮತ್ತು ಮಂದ್‌ನ ಮೂರ್ತಿಗಳ ಆಯುದಗ ಮತ್ತೆ ಬಿಲ್ ಬಾಣಗಳ ಇಟ್‌ಕಂಡ್ ಪೂಜಿಸಿ ಕಂಡ್ ಬರ್‌ತ್ತೋಳೋ. ಇದ್ ಅನಾಧಿ ಕಾಲದಿಂದ ಇದ್ದದ್ ಇಂದ್ ಮುಟ್ಟ ನಡಿತುಟ್ಟು. ಇನ್ ಮುಂದಕ್ಕೆ ನಡ್ದದೆ.

## ಈ ಐನ್ ಮನೆಯ ಒಂದು ವಿಶೇಷ ಏನ್ತ್ತೇಳ್ರೆ

ಶುಭಕಾರ್ಯಗಳಲ್ಲಿ ಈ ಗುರುತ್ತೇಳುವ ಮುತ್ತಾತ (ಅಂದರೆ ಅಜ್ಜ ) ಕಣ್ಮರೆಯಾದ ಅಂದರೆ ತೀರಿ ಹೋದಂತಹ ಮೂಲ ವ್ಯಕ್ತಿಯಿಂದ ಹಿಡ್ದ್ ಇಲ್ಲಯವರೆಗೆ ಅವರ ಕುಟುಂಬಸ್ಥರ ಸರ್ವ ವ್ಯಕ್ತಿಗಳನ್ನು ಗ್ಯಾನ ಮಾಡಿಕಂಡ್ ಅವರ ಹೆಸರೇಳಿ ಮಾಡಿದಂತಹ ಅಡುಗೆನ ಬದುಕುಳಿದ ಕುಟುಂಬಸ್ಥರ್ ಸೇರಿಕಂಡ್ ಒಂದು ನಿಗಧಿಪಡಿಸಿದ ಜಾಗಲಿ ಅದ್ ಉಂಬೊಳಗೆ ಅಂದರೆ ಅಡುಗೆ ಮನೆ, ಹಂಗೆನೆ ಅಡುಗೆ ಮನೆಂದ ಅಟ್ಟಕ್ಕೆ ಹತ್ತುವ ಏಣೀ ಬುಡಲಿ ಒಂದು ಚಾಪೆ ಹಾಕಿ ಆ ಚಾಪೆ ಮ್ಯಾಲೆ ಕಾರಣಕ್ಕೆ ಹಾಕುವ ಮಣೆ ಇಟ್ಟ್ ಆ ಮಣೆ ಮ್ಯಾಲೆ ಬಾಳೆಲೆ ಕೀಂತ್ (ಅಂದರೆ ಸಣ್ಣ ಸಣ್ಣದ್ದಾಗಿ ಮಾಡ್ದ ಬಾಳೆಲೆ) ಇಡ್ದು. ಇಂದ್‌ನ ಕುಟುಂಬಲಿ ಇದನ್ನ ಪಾರಂಭರಿಸಿ ನೋಡಿರೆ ಒಂದೊಂದು ಮನೆಲಿ ಒಂದೊಂದು ಪದ್ದತಿ ಉಟ್ಟು ಇದಕ್ಕೆ ಮೂಲ ಕಾರಣತ್ತೇಳಿರೆ ಅಂದ್‌ನ ಕಾಲಲಿ ಕಾಡ್ ಮದ್ಯದಲಿ ಎಲ್ಲೆಲ್ಲೋ ಒಂದೊಂದು ಮನೆಗ. ಅಂತದ್ ಒಂದು ಹತ್ ಮನೆ ಸೇರಿಕಂಡ್ ಒಂದು ಗುಂಪು ಸೇರಿಕಂಡ್ ಆವೆ ಮಾಡಿಕಂಡ್ ಬಂದಂತ ಪದ್ದತಿ ಅಥವಾ ನಡ್‌ಪು ಅವು ಗೌಡ ಕುಟುಂಬಸ್ಥರ ಬ್ಯಾರೆ ಬ್ಯಾರೆ ಮನೆಗಳಿಗೆ ಹೋಗ್‌ತಿತ್ತಲೆ, ಹೋಕೆ ಆಗತ್ತಿತ್ತ್‌ಲೆ. ದೊಡ್ಡ ದೊಡ್ಡ ಕಾಡ್ ಒಂದ್ ಕಡೆಂದ ಇನ್ನೊಂದು ಕಡೆಗೆ ಹೋಕೆ ದಾರಿ ಇತ್ತ್‌ಲೆ. ಕಾಡ್‌ಲೆ ದೂರ ದೂರ ಹೋದರೆ ಹಿಂದಕ್ಕೆ ಬಾಕೆ ದಾರಿಸಿಕ್‌ತ್ತಿತ್‌ಲೆ. ಅಲ್ಲಲ್ಲಿ ಕಾಡ್ ಪ್ರಾಣಿಗಳ ಹೆದ್‌ರಿಕೆ ಅಲಿಲ್ಲಿ ಹೊಳೆ ದೊಡ್ಡ ತೋಡು ದಾಟಿ ಹೋಕೆ ಆಗ್‌ತ್ತಿತ್ತ್‌ಲೆ. ಸ್ವಲ್ಪ ಬುದ್ದಿವಂತರಾದಂಗೆ ಅಲ್ಲಿ ಪಾಲ ಹಾಕಿ ಒಂದು ಕಡೆಂದ ಇನ್ನೊಂದು ಕಡೆಗೆ ಹೋಗುತ್ತಿದ್ದೋ ಗಡ. ಹಂಗಾಗಿ ಒಂದೊಂದು ಕುಟುಂಬಲಿ ಒಂದೊಂದು ರೀತಿಲಿ ಕಾರಣಕ್ಕೆ ಹಾಕುದು. ಅದೇ ರೀತಿಲಿ ಶವ ಸಂಸ್ಕಾರದ

ಪದ್ಧತಿ ( ರೀತಿ ನೀತಿ) ಇಂದಿಗೂ ನಡಿತುಟ್ಟು. ಅಂದರೆ ಊರಿಗೊಂದು ಪದ್ಧತಿ ಅಥವಾ ಮನೆಗೊಂದು ನಡ್‌ಪು ಆಗಿಟ್ಟು. ಇದಕ್ಕೆ ಬ್ಯಾರೆ ಕಾರಣಗಳಿಲ್ಲೆ. ಇದನ್ನು ಬುದ್ಧಿ ಜೀವಿಗಳಾದ ಈ ಮುಂದ್‌ವರ್‌ದ ಕಾಲಲಿ ನಾವು ನೀವು ಸೇರಿ ಒಂದೇ ತರಹದ ಪದ್ಧತಿ ಅಥವಾ ನಡ್‌ಪು ಮಾಡಿಕೆ ಈ ನಮ್ಮ ಅರೆಭಾಷೆ ಅಕಾಡೆಮಿ ಮುಖಾಂತರ ಹೋಗಿ ಚರ್ಚೆ ಮಾಡಿ ಒಮ್ಮತದ ತೀರ್ಮಾನ ಮಾಡಿ ಒಂದೇ ಪದ್ಧತಿ ಅಥವಾ ನಡ್‌ಪು ಮಾಡಿಕೊಂಬುದು ಬಹಳ ಶ್ರೇಷ್ಟತ್ತೇಳ್ದು ನನ್ನ ಅಭಿಪ್ರಾಯ.

## ಐನ್ ಮನೆಯ ವಿಶೇಷತೆ

ಆ.ಯಿನ್. ಇದನ್ನ್ ಬಿಡಿಸಿ ಹೇಳಿರೆ ನಾವುಗೆ ಸಿಕ್ಕುವ ಅರ್ಥ ಆ. ಅಂದ್ ಇತ್, ಯ ಇಂದ್ ಉಟ್ಟು, ನ್. ಇನ್‌ಮುಂದಕ್ಕೂ ಇದ್ದದೆ. ಆದರೆ ಅದನ್ನ ನಾ ಹೇಳ್ದಂಗೆ ಈಗ ಬರೆಯದುಲೆ. ಐನ್ ತೇಳಿ ಬರ್‌ದವೆ ಅಂದರೆ ಅಂದ್ ಭಾಷೆಗೆ ಅದ್ ಖಂಡಿತಾಗಿ ಸರಿಯುಟ್ಟು.

**ಐನ್ ಮನೆಲೆ ಕುಟುಂಬದ ಹರಿಸೇವೆ.**

ಇದರಲ್ಲಿ ಘನ ಹರಿಸೇವೆ ಮತ್ತೆ ಬಿಡ್ ಹರಿಸೇವೆ
ಮತ್ತೆ ಕಾರ್ತಿಂಗಳಲ್ಲಿ ದೆವ್ವಗಳಿಗೆ ಕೊಡ್ದು
ಈಗ ಪೂಜಾರೀರ ಕುಟುಂಬಸ್ಥರ ಮನೆ ಪದ್ಧತಿ ನಡ್ದು.

* * * * *

# ಹರಿಸೇವೆ

(1) ಘನ ಹರಿಸೇವೆ 2) ಬಿಡು ಹರಿಸೇವೆ

ತಿರುಪತಿ ವೆಂಕಟರಮಣ ಸ್ವಾಮಿ ಗೌಡರ ಕುಲದೇವರು.

ಅಂದ್‌ಂದ ಇಂದ್‌ಮುಟ್ಟ ಇನ್ನ್ ಮುಂದಕ್ಕೂ ಪೂಜಿಸಿ ಕಂಡ್ ಹೋಗುವಂತ ದೇವರು. ಈ ಸ್ವಾಮಿನ ಮೂಲ ಅವತಾರವೆ ಶ್ರೀ ಕೃಷ್ಣ ಪರಮಾತ್ಮ. ಕಪ್ಪು ಮತ್ತು ಕುಳ್ಳ ಗಿಡ್ಡ ಕೃಷ್ಣ . ಆದಿಶೇಷನ ಮ್ಯಾಲೆ ಮಲಗಿದ್ದ ಕೃಷ್ಣ. ಈ ಕೃಷ್ಣ ಪರಮಾತ್ಮನ ಅರ್ಧಾಂಗಿ ಆಧಿಶಕ್ತಿ ಅಥವಾ ರಾಜರಾಜೇಶ್ವರಿ. ಶ್ರೀ ಮಹಾವಿಷ್ಣುವಿನ ಅರ್ಧಾಂಗಿ ಆಧಿಲಕ್ಷ್ಮೀ. ಶ್ರೀ ರಾಮಚಂದ್ರನ ಧರ್ಮಪತ್ನಿ ಲಕ್ಷ್ಮಿ ಅವತಾರದ ಸೀತೆ ಶ್ರೀ ಕೃಷ್ಣನ ಕಲಿಯುಗದ ಅವತಾರದ ತಿರುಪತಿ ವೆಂಕಟೇಶ್ವರನ ಧರ್ಮಪತ್ನಿ ಇವರ ಹೆಸರೇಳಿ ಹರಿಸೇವೆ ಮಾಡ್ತು.

**ಪತ್ನಿ ಭಾಗ್ಯಲಕ್ಷ್ಮೀ: ಇವರ ಹೆಸರೇಳಿ ಹರಿಸೇವೆ**

ನಮ್ಮ ಐನ್‌ಮನೆಗೆ ಸಂಬಂಧಪಟ್ಟ ಹಿರಿಯವರ್‌ನ್ನ ಪಟ್ಟೆದಾರತ್ತೇಳ್ದು, ಅಂದ್‌ದ ಇಂದ್ ಮುಟ್ಟ ಹಂಗೆನೆ ಇನ್

ಮುಂದಕ್ಕೂ ನಡ್ಕಂಡ್ ಹೋಗುವಂತ ಪದ್ಧತಿ. ಅ ಹಿರಿಯ ಮನುಷ್ಯನ ಪಟ್ಟೆದಾರರ ಮಾತ್ ಅಥವಾ ಸಲಹೆ ಸೂಚನೆಗಳಂತೆ ಖಡ್ಡಾಯವಾಗಿ ನಡ್ಕೋಣಕು.

ಹಂಗೆನೆ ಒಂದು ವರ್ಷಕ್ಕೆ ಒಂದು ಸಾರಿ ಅಥವಾ ಐದ್ ವರ್ಷಕ್ಕೊಂದ್ ಸಾರಿ ಸ್ವಾಮೀಗೆ ಹರಿಸೇವೆ ಮಾಡುವ ಪದ್ಧತಿನ ಗೌಡ ಮನೆತನದವು ರೂಢಿ ಮಾಡಿಕೊಂಡ್ ಬಂದೊಳೊ ಹಂಗೆನೆ ನಡ್ಕೋತ್ತೋಳೊ.

ನಾವು ಹರಿಸೇವೆ ಮಾಡುವ ಸಮಯಲಿ ಪಟ್ಟೆದಾರ ಕುಟುಂಬಸ್ಥರೆಲ್ಲಾ ಬಂದು ಈ ಐನ್‌ಮನೆಲಿ ಸಭೆ ಸೇರೋಕುತ್ತೇಳಿ ತಿಳ್‌ಸುವೆ. ಹಂಗೆನೆ ಕುಟುಂಬಸ್ಥರ್ ಒಟ್ಟ್ ಸೇರಿ ಯಾಗ, ಹರಿಸೇವೆ ಮಾಡ್ತ್ತೇಳಿ ಗೊತ್ತು ಪಡಿಸಿಕೊಂಡವೆ. ಈ ಹರಿಸೇವೆ ಮಾಡಿಕೆ ಮುಖ್ಯವಾಗಿ ಬೇಕಾದ ವ್ಯಕ್ತಿತ್ತೇಳಿರೆ "ದಾಸ". ದಾಸ ಇಲ್ಲದೆ ಹರಿಸೇವೆ ಮಾಡುವಂಗೆ ಇಲ್ಲೆ. ಆದರೂ ಸಹ ಕೆಲವು ಕುಟುಂಬಸ್ಥರ್ ಬ್ರಾಹ್ಮಣರ್‌ಂದ ಪಾನಕ ಪೂಜೆತ್ತೇಳಿ ಮಾಡಿಸಿವೆ. ಇನ್ ಕೆಲವು ಕುಟುಂಬಲಿ ಕುಟುಂಬಸ್ಥರ್ ಮತ್ತೆ ಊರ್ ಭಕ್ತರ್ ಸೇರಿಕಂಡ್ ಗುಂಡ ಕಟ್ಟಿವೆ. ಮತ್ತೆ ಬ್ರಾಹ್ಮಣರಿಂಧ ಪೂಜೆ ಮಾಡಿಸಿವೆ. ಇದ್ ಅವರವರ ಕುಟುಂಬಕ್ಕೆ ಸಂಬಂದಿಸಿದ ಪದ್ಧತಿ ಅಥವಾ ನಡ್‌ಪು. ಆದರೆ ಗೌಡ ಜನಾಂಗದ ಪದ್ಧತಿ ಅಥವಾ ನಮ್ಮ ಪ್ರಕಾರ ದಾಸನಿಂದ ಹರಿಸೇವೆ ಮಾಡ್ಸುದು ಶ್ರೇಷ್ಠ. ಅದರ್‌ಂದಾಗಿ ನಾವು ಸುರುಗೆ (ಮೊದಲ್) ದಾಸಂಗೆ ಹರಿಸೇವೆಗೆ ಬಾಕೆ ಯಾಗ ಸಮಯ ಉಟ್ಟತ್ತೇಳಿ ತಿಳ್‌ಕಂಡ್ ದಾಸನ ಒಪ್ಪಿಗೆ ಪಡ್ದ್ ಆ ದಿನ ಹರಿಸೇವೆನ ನಿಗಧಿ ಪಡಿಸಿವೆ. ಗೊತ್ತುಪಡಿಸಿವೆ.

ಕುಟುಂಭದ ಮುಡ್‌ಪು ಮತ್ತೆ ತಿರುಪತಿಗೆ ಹೋಗಿ ಬಾದು ಮತ್ತೆ ಕುಟುಂಭಸ್ತರ ಪರವಾಗಿ ಎರಡ್ ಗುಂಡಕಟ್ಟೆ ಹರಿಸೇವೆ ಮಾಡ್ದು. ಅದರೊಟ್ಟಿಗೆ ಕುಟುಂಭಸ್ತರ್ ಭಕ್ತಿಯಿಂದ ಅಥವಾ ಹರಿಕೆ ಗುಂಡ ಕಟ್ಟಿಸುವವು ಇದ್ದರೆ ಅದೆಷ್ಟತ್ತೇಳಿ ತಿಳ್‌ಕಂಡ್ ದಾಸಂಗೆ

ಒಟ್ಟು ಇಷ್ಟ್ ಗುಂಡ ಉಟ್ಟುತ್ತೇಳಿ ತಿಳಿಸಿವೆ. ಮುಂದೆ ಈ ಹರಿಸೇವೆಗೆ ಬರುವಂತ ಭಕ್ತಾದಿಗಳ ಅಂದಾಜು ಲೆಕ್ಕಹಾಕಂಡ್ ಅಂದರೆ ಅವರ ಊರಿನವು ಪೂರ್ತಿ ಅವರ ಕುಟುಂಬಸ್ತರ ನೆಂಟರ ಸಂಖ್ಯೆನ ಗ್ಯಾನಮಾಡಿಕಂಡ್ ಎಷ್ಟ್ ಕಾಗದ ಮಾಡ್ಲೊಕು, ಎಂತಾ: ಅಡ್‌ಗೆ ಮಾಡ್ಸಿ ಊಟೋಪಚಾರ ಮಾಡ್ಲೊಕು. ಇನ್ ಹತ್ತಾರ್ ಜನ ಕುಟುಂಭಸ್ತರ ಸಲಹೆ ಸೂಚನೆಗಳಂಗೆ ಏರ್ಪಾಡ್ ಮಾಡಿಕಂಡ್‌ವೆ. ಇದಲ್ಲದೇ ಓಲಗ ಬೇರೆ ಬೇಕು, ಮತ್ತೆ ಮಡಿವಾಳ ಬೇಕು. ಇದನ್ನೆಲ್ಲ ಸೇರಿಸಿ ಒಂದು ಅಂದಾಜು ಪಟ್ಟಿ ಮಾಡಿಕಂಡವೆ. ಹಂಗೆನೆ ಕುಟುಂಭದ ಒಂದೊಂದು ವ್ಯಕ್ತಿಗೆ ಒಂದೊಂದು ಕೆಲ್ಸಗಳ್ನ ಒಪ್ಪಿಸಿ ಬಿಟ್ಟವೆ. ಇದೇ ಸಮಯಲಿ ಹರಿಸೇವೆ ಐದು ವರ್ಷಗಳದ್ದ್ ಆದರೆ ಅದನ್ನ ಘನ ಹರಿಸೇವೆತ್ತೇಳಿ ಹರಿಸೇವೆ ನಡ್ಸ್‌ವೆ. ಇದ್ ಆಯಾಯ ಕುಟುಂಭಕ್ಕೆ ಸಂಬಂಧಪಟ್ಟದ್. ಕಾರಣ ಒಂದು ವರ್ಷಂದ ಐದು ವರ್ಷದೊಳಗೆ ನಾನೊಬ್ಬನೇ ಹರಿಸೇವೆ ಮಾಡಿ ಭಕ್ತಾದಿಗಳಿಗೆ, ಕುಟುಂಭಸ್ತರಿಗೆ ಅನ್ನದಾನ ಮಾಡಿನೇತ್ತೇಳಿ ಮುಂದೆ ಬರವು ಇದ್ದರೆ ಈ ನಾಲ್ಕು ವರ್ಷಲಿ ಸ್ವಂತ ಹರಿಸೇವೆ ಮಾಡ್ಸಕ್. ಇದ್‌ಕ್ಕೆ ಕುಟುಂಭಸ್ತರ ಸರ್ವ ಒಪ್ಪಿಗೆ ಇದ್ದದೆ. ಆದರೆ ಐದನೇ ವರ್ಷದ ಕುಟುಂಭದ ಹರಿಸೇವೆಲಿ ಆ ವ್ಯಕ್ತಿಗೆ ಸಂಬಂಧಪಟ್ಟ ಖರ್ಚ್ ವೆಚ್ಚಕ್ಕೆ ಹಣ(ಪಾಲು ಹಣ) ಖಡ್ಡಾಯವಾಗಿ ಕೊಟ್ಟೆ ಕೊಡಕು. ಅಂದರೆ ಐದನೇ ವರ್ಷದ ಘನ ಹರಿಸೇವೆ ಇಡೀ ಕುಟುಂಭಸ್ತರ ಮತ್ತೆ ಕೊಟ್ಟ ಗೂಡೆಗಳ ಪರವಾಗಿ ನಡ್ಸುವ ಹರಿಸೇವೆ. ಇದನ್ನ ಮಾತ್ರ ಯಾರೆ ಒಬ್ಬನೇ ನಡ್ಸಿಕೆ ಅವಕಾಶ ಇಲ್ಲೆ. ಇಲ್ಲಿ ಮನೆಂದ ಕೊಟ್ಟ ಗೂಡೆಗಳಿಗೆ ಮಾತ್ರ ಗುಂಡ ಕಟ್ಟಿಕೆ ಅವಕಾಶ ಉಟ್ಟು. ಹಂಗೆನೇ ಕುಟುಂಬಸ್ತರ್ ಯಾರಿಗಾದರೂ ಸ್ವಾಮಿನ ಬಳಿ ಕಂಡನೇತ್ತೇಳಿ ಹೇಳಿಕಂಡಂತ ಸಂದರ್ಭ ಇದ್ದರೆ ಅವುಕೆ ಒಂದ್ ಗುಂಡ ಕಟ್ಟಿಕೆ ಅವಕಾಶ ಉಟ್ಟು . ಇದಕ್ಕೆ ಸಂಬಂಧಿಸಿದಂಗೆ ಆ ವ್ಯಕ್ತಿ ಇಂತಿಷ್ಟ್ ಹಣ ಕೊಡೊಕುತೇಳಿ ಆ ಕುಟುಂಭದ ಸಭೆಲಿ

ತೀರ್ಮಾನಿಸಿಕಂಡಂಗೆ. ಇದ್ ಹರಿಸೇವೆನ ಒಂದನೇ ಹಂತ.

**ಈಗ ಹರಿಸೇವೆಯ ಎರಡನೇ ಹಂತ: ಐನ್ ಮನೆಲಿ ಕಟ್ಟಿಟ್ಟ ಮುಡ್‌ಪುನ ತಕೊಂಡ್ಹೋಗಿ ತಿರುಪತಿಗೆ ಒಪ್ಸಿ ಬರುವ ಪದ್ದತಿ:**

ಕುಟುಂಬದ ಸಭೆಲಿ ತೀರ್ಮಾನಿಸಿದಂಗೆ ಆ ಕುಟುಂಭದ ಒಬ್ಬ ಗಂಡ್ ಮತ್ತೆ ಹೆಣ್ಣ್ ಈ ಮುಡ್‌ಪುನ ಹೊತ್ತ್ ತಿರುಪತಿಗೆ ಒಪ್ಸಿ ಬಾದು. ಬಂದ ಮ್ಯಾಲೆ ಹರಿಸೇವೆ ಮಾಡ್ದು. ಇದ್ ಹೆಂಗೆ ತೇಳಿರೆ ಹಿಂದೆಂದ ನಡ್‌ಕಂಡ್ ಬಂದ ಪದ್ಧತಿ . ತಿರುಪತಿಗೆ ಹೋಗಿ ಬರುವಂತ ಕುಟುಂಬದ ಒಬ್ಬ ಗಂಡ್ ಮತ್ತೆ ಹೆಣ್ಣ್ ತಕೊಂಡೊಗುವ ಮುಡ್‌ಪುಲಿದ್ದ ಹಣಲಿ ಇಲ್ಲಿಂದ ಹೊರ್‌ಟ್ ತಿರುಪತಿಗೆ ಹೋಗಿ ಹುಂಡಿಲಿ ಹಣ ಹಾಕುವವರೆಗಿನ ಖರ್ಚಿನ ಹಣ ಆ ಮುಡ್‌ಪುಲಿದ್ದ ಹಣ ಖರ್ಚ್ ಮಾಡಕ್. ಬಾಕಾಕನ ಮುಡ್ಪುನ ಹಣದ ಒಂದ್ ಕಾಸ್ ಅಥವಾ ಪೈಸೆ ಸಹ ಬಾಕಿ ಆಕಾಗದ್‌ತ್ತೇಳಿ. ಅಂದರೆ ಇದ್ ಅತೀ ಹಿಂದಿನ ಕಾಲಲಿ ತಿರುಪತಿ ಹುಂಡಿಲಿ ಹಣ ಹಾಕಿಕೆ ಹೋಕೆ ಅವರ ಖರ್ಚಿಗೆ ಹಣ ಇಲ್ಲೆ ಏನ್ ಮಾಡ್ದುತಾ ಹೇಳಿಕಂಡ್ ಇದ್ದ ಸಮಯಲಿ ಹತ್ತರ ಹರಿಸೇವೆಲಿ ಸ್ವಾಮಿ ಮುಡ್‌ಪಿಗೆ ಹಾಕಿದ ಹಣನ ಅಟ್ಟದ ಗಳ್ ಅಥವಾ ಕೌಕೋಲ್‌ಗಳಲ್ಲಿ ಕಟ್ಟಿ ಒಂದು ತಾಮ್ರದ ಚೆಪ್ಪು ಅಥವಾ ನೊಜೆಯಿಂದ ಮಾಡಿದ ಚೆಪ್ಪುಗಳಲ್ಲಿ ತುಂಬಿಸಿ ಇಟ್ಟ್ ಅದರ್‌ಲಿ ಇಷ್ಟೇ ಹಣ ಉಟ್ಟ್‌ತ್ತೇಳಿ ಪ್ರತಿ ಹರಿಸೇವೆಲಿ ಲೆಕ್ಕ ಮಾಡಿ ಬರ್‌ದಿಟ್ಟವೆ. ಈ ಹಣನ ಖರ್ಚ್ ಮಾಡಿಕಂಡ್ ಹೊಗ್‌ತಿದ್ದೊ. ಈಗ ಆ ಸ್ವಾಮಿನ ದಯದಿಂದ ಲಕ್ಷ್ಮೀಯ ಅನುಗ್ರಹಂದ ಅಂತಹ ತೊಂದರೆ ಯಾವ ಕುಟುಂಬಸ್ತರಲ್ಲಿ ಕಾಂಬಲೇ. ಕುಟುಂಬಸ್ತರ್ ಒಂದು ಗಾಡಿ ಮಾಡಿಕಂಡ್ ಅವರ ಅನುಕೂಲಕ್ಕೆ ತಕ್ಕಂಗೆ ಒಂದೊಂದು ಗುಂಪು ಮಾಡಿಕಂಡ್ ಆ ಸ್ವಾಮಿನ ಕೊಂಡಾಡಿಕಂಡ್ ತಿರುಪತಿಗೆ ಹೋಗಿ ಮುಡ್‌ಪು ಒಪ್ಪಿಸಿ ಬಂದವೆ.

## ಈಗ ಮುಡ್‌ಪುನ ತಿರುಪತಿಗೆ ತಕೊಂಡೊಗುವ ಪದ್ಧತಿ

ತಿರುಪತಿಗೆ ಹೊರ್‌ಡಿಕೆ ಮೊದಲ್ ಐನ್ ಮನೆಗೆ ಗಣಪತಿ ಹೋಮ ಹಾಕಿಸಿವೆ. ಆಗ ಅಟ್ಟದ ಮೇಲೆ ಇದ್ದ ಮುಡ್‌ಪ್‌ನ ಕುಟುಂಬದ ಪಟ್ಟೇದಾರರ ಅನುಮತಿ ಪಡೆದ್ ಬಿಚ್ಚಿ ತಂದ್ ಹೋಮ ಹಾಕುವ ಜಾಗೇಲಿ ಒಂದೊ ಚಾಪೆ ಮ್ಯಾಲೆ ಅಥವಾ ಮಣೆ ಮ್ಯಾಲೆ ಇಟ್ಟ ಬ್ರಾಹ್ಮಣಂದ ಪೂಜೆ ಮಾಡಿಸಿವೆ. ಒಂದ್ ವೇಳೆ ಹೋಮ ಹಾಕಿಕೆ ಅನಾನುಕೂಲ ಆದರೆ ದಾಸನ ಕರೆಸಿ ಮುಡ್‌ಪ್ ಪೂಜೆ ಮಾಡಿಸಿವೆ. ಇವೆರೆಡು ಮಾಡಿಕೆ ಅನುಕೂಲ ಆತ್‌ಲೆತ್ತೇಳಿರೆ ಕುಟುಂಬದ ಪಟ್ಟೇದಾರರ್ ಬಂದ್ ಮುಡ್‌ಪ್‌ನ ಇಳಿಸಿಕೊಟ್ಟವೆ. ನೆಲ್ಲಕ್ಕಿ ಮುಂದೆ ಚಾಪೆ ಅಥವಾ ಮಣೆ ಮ್ಯಾಲೆ ಇಟ್ಟ ಅದರ ಕೆಳಭಾಗಲಿ ಕೊಡಿಬಾಳೆಲೆ ಇಟ್ಟ್ ತಿರುಪತಿಗೆ ಮುಡ್‌ಪ್ ತಕ್ಕೊಂಡ್ ಹೋಗುವ ವ್ಯಕ್ತಿ ಮುಡ್‌ಪ್ ಬಿಚ್ಚಿ ಹಣ್‌ಕಾಯಿ ಮಾಡಿ, ಮಂಗಳಾರತಿ ಮಾಡಿ ಊದುಬತ್ತಿ ಹತ್ತಿಸಿ ಅಥವಾ ಸಾಂಬ್ರಾಣಿ ಹೊಗೆ ಹಾಕಿ ವಿಭೂತಿ ಗಂಧ, ಕುಂಕುಮ ಇಟ್ಟ್ ಪೂಜೆ ಮಾಡಿ ಎಲ್ಲವು ಸ್ವಾಮಿ ಮಾಡಿಕಂಡ್ ಅಲ್ಲಿಟ್ಟ ಬಾಳೆಲೆಗೆ ಅವರ ಭಕ್ತಿಯ ಕಾಣಿಕೆ ಹಾಕುವೆ. ಎಲ್ಲ ಹಣ ಸೇರಿಸಿ ಆ ಒಟ್ಟು ಹಣನ ಲೆಕ್ಕ ಮಾಡಿ ಒಂದು ಬಿಳಿ ಬಟ್ಟೇಲಿ ಕಟ್ಟಿ ನೆಲ್ಲಕ್ಕಿ ಮುಂದೆ ಇಟ್ಟವೆ. ಹಂಗೆನೆ ಕಟ್ಟಿಟ್ಟ ಮುಡ್‌ಪ್ ಖಾಲಿ ಇಡಕಾಗದ್ ತ್ತೇಳಿ ಅದರೊಳಗೆ ತುಳಸಿ, ಹೂಗಳ್ನ ಹಾಕಿ ತಕ್ಕೊಂಡೋಗಿ ಮನೆಯ ಹತ್ತಿರ ಇರುವ ಚಾಳೆ ಮರ (ತೆಂಗಿನಮರ) ಅಥವಾ ಹತ್ತಿರ ಇದ್ದ ಹಲಸಿನ ಮರ ಒಟ್ಟಾರೆ ಹತ್ರಲಿ ಇರುವ ಒಂದ್ ಹಾಲ್ ಬರುವ ಮರಲಿ ಕಟ್ಟಿಟ್ಟವೆ. ಆ ಸಮಯಲಿ ಅಲ್ಲಿದ್ದ ಕುಟುಂಬಸ್ಥರಿಗೆ ಊಟ ಕೊಟ್ಟ್ ನಂತರ ತಿರುಪತಿಗೆ ಹೋಗುವ ಭಕ್ತರ್ ಊಟ ಮಾಡಿ ತಿರುಪತಿಗೆ ಹೊರಡಿಕೆ ಏರ್ಪಾಡ್ ಮಾಡಿವೆ. ಬಾಡೆಲಿ ಇರುವ ನೆಲ್ಲಕ್ಕಿ ದೀಪದ ಮುಂದೆ ಕುಟುಂಬ ಸ್ಥರ್ ಎಲ್ಲಾ ಸೇರಿ ಕೈಲಿ ಅಕ್ಕಿ ಹಿಡ್ದ್ ನಿಂತಿದ್ದವೆ. ಪಟ್ಟೇದಾರರ್



4

ಅವರ ಅನುಭವದ ಒಂದೆರೆಡ್ ಮಾತ್‌ಗಳ್ನ ದೀವಿಗೆ ಮುಂದೆ ಹೇಳಿಕಂಡವೆ. ಅದೇ ಸಮಯಕ್ಕೆ ಸರಿಯಾಗಿ ಸ್ವಾಮಿಯ ಹರಿಸೇವೆ ಮಾಡಿಕೆ ಜೋಡು (ಎರಡು) ಗೊನೆ ಕಡ್ದ್ ತಂದ್ ನೆಲ್ಲಕ್ಕಿ ಮುಂದೆ ಇಟ್ಟಿದ್ದವೆ. ಈ ಬಾಳೆ ಗೊನೆಗಳ್ನ ಆ ಮನೆಯ ದೆವ್ವ ದೇವರುಗಳಿಗೆ ಗೊನೆ ಕಡಿತ್ತಿರುವವು ಕಡಿಯೊಕು ಆದರೆ ಕೆಲವು ಮನೆಗಳಲ್ಲಿ ತಿರುಪತಿಗೆ ಮುಡ್‌ಪೊತ್ತು ಹೋಗುವವು ಕಡ್ದ್‌ವೆ. ಕಡ್ದ್‌ಂತ ಬಾಳೆ ಗೊನೆನ ಐನ್‌ಮನೆಯ ಮೂಡಣ ಮೆಟ್ಟ್‌ಲಲ್ಲಿಟ್ಟ್ ಅದಕ್ಕೆ ಬಾವಿಂದ ಒಂದ್ ಬಿಂದಿಗೆ ಶುದ್ದ ನೀರ್ ತಂದ್ ಹ್ಯೊದ್ ಶುದ್ದ ಮಾಡ್ದ್ ಮೇಲೆ ನೆಲ್ಲಕ್ಕಿ ಮುಂದೆ ಇಟ್ಟವೆ.

ಅಲ್ಲಿ ಸರ್ವ ಸಾಧಾರಣವಾಗಿ ಈ ರೀತಿ ಹೇಳಿಕಂಡವೆ. ಕುಟುಂಬದ ಅಂದರೆ ಅಲ್ಲಿ ಕೂಡಿದವರಲ್ಲಿ ಒಂದೆರೆಡ್ ಹಿರಿಯವರ ಹೆಸರ್‌ಗಳ್ನ ಹೇಳಿಕಂಡ್ ಮತ್ತೆ ನಮ್ಮ ಕೂಡ್ದ ಸಂಸಾರ ಮುಂದೆ ಈ ನೆಲ್ಲಕ್ಕಿ ಅಡಿಲಿ ಹೇಳಿಕಂಬದು ಏನ್‌ತ್ತೇಳಿರೆ, ನಾವು ನಮ್ಮ ಕುಟುಂಬಸ್ಥರ ಒಪ್ಪಿಗೆಯಂಗೆ ಪ್ರತಿ ವರ್ಷ ಅಥವಾ ಐದು ವರ್ಷಕ್ಕೊಮ್ಮೆ ಹರಿಸೇವೆ ಅಥವಾ ಪುನಃ ಹರಿಸೇವೆ ನಡ್ಸಿಸಿ ಸ್ವಾಮಿನ ಬೊಳಿ ಕಾಂಬಂತ ಪದ್ಧತಿ ಮಾಡಿಕೊಂಡೊಳೊ ಹಂಗೆನೆ ಈ ವರ್ಷ ಇಂದಿಗೆ ಎಂಟ್ ದಿನಲಿ ಮಾಡ್ಸುವೆತ್ತೇಳಿ ನಿಶ್ವಯಿಸಿ ಕೊಂಡೊಳೊ. ಅದ್‌ಕ್ಕೆ ಮುಂದೆ ಅಟ್ಟಲಿ ಕಟ್ಟಿಟ್ಟ ಮುಡ್‌ಪ್‌ನ ಬಿಚ್ಚಿ ತಂದ್ ನೆಲ್ಲಕ್ಕಿ ಮುಂದಿಟ್ಟ್ ಪೂಜೆ ಮಾಡುವಂತ ಕಾರ್ಯಕ್ರಮನ ಮಾಡಿಯೊಳೊ. ಈಗ ಮುಡ್‌ಪು ಕಟ್ಟಿದ ಜಾಗೆಲಿ ಈಗ ಕಡ್ದ್ ಜೋಡು ಬಾಳೆ ಗೊನೆನೆ ಕಟ್ಟಿಟ್ಟವೆ. ಹಂಗೆನೆ ಖಾಲಿ ಮುಡ್‌ಪ್‌ನ ಹಾಲ್ ಬರುವ ಮರಲಿ ಕಟ್ಟಿಟ್ಟೊಳೊ. ಈಗ ಸ್ವಾಮಿನ ಮುಡ್‌ಪ್‌ಲಿದ್ದ ಹಣನ ಬಿಳಿ ಬಟ್ಟೆಲಿ ಗಂಟ್ ಕಟ್ಟಿ ಇಟ್ಟಳೊ. ಈ ಹುಂಡಿ ಹಣದ ಕುಟುಂಬದ ಇಂತವು: ಹೆಸರ್: ದಂಪತಿಗ.... ನಿನ್ನ ಆದಿ ನೆಲೆ ತಿರುಪತಿಗೆ ಹೊತ್ತ್ ಹುಂಡಿಗೆ ಒಪ್ಪಿಸಿ ಬಂದವೆ. ಅವು ಮತ್ತೆ ಅವರೊಟ್ಟಿಗ 'ಭಕ್ತರ್

ಸೇರಿ ನಿನ್ನ ಪಾದ ಸೇವೆಗೆ ಹೊರಟ ಸರ್ವ ಭಕ್ತರ್ ಇಲ್ಲಿಂದ ಹೊರಟ್ ಮುಡುಪೊಪ್ಪಿಸಿ ಮತ್ತೆ ಮನೆಗೆ ಬಂದ್ ಮುಟ್ಟುವವರೆಗೆ ಯಾವುದೇ ತೊಂದರೆ ಆಗದಂಗೆ ಹಂಗೆನೆ ಇಂದಿಗೆ 8 ದಿನಲಿ ನೆಡ್ಸುವ ಹರಿಸೇವೆಗೆ ಸಹ ಯಾವುದೆ ತೊಂದರೆ ಆಗದಂಗೆ ನಾವ್ ಕೊಟ್ಟ್ ಕೊಂಡಾಡುವಂತ ದೈವ, ದೇವರ್‌ಗ, ಗುರು ಕಾರಣವ್ ಊರಿನ ದೇವರ್‌ಗ ಮತ್ತೆ ತಿರುಪತಿ ವೆಂಕಟರಮಣ ಸ್ವಾಮಿನ ಬೇಡಿಕಂಡ್ ನಾನ್ ಇಂದ್ ಈ ಹುಂಡಿನ " ಹೆಸರ್ " ಇವುಕೆ ಎತ್ತಿಕೊಟ್ಟನೆ. ಗೋವಿಂದಾನ್ ಗೋವಿಂದ ಗೋವಿಂದಾ ಶ್ರೀ ವೆಂಕಟರಮಣ ಸ್ವಾಮಿ ಪಾದಾರವಿಂದಕ್ಕೆ ಗೋವಿಂದಾ, ಗೋವಿಂದತ್ತೇಳಿ ಹತ್ತಾರ್ ಸಲ ದೇವರ ಹೆಸರನ ಕರ್‌ಕಂಡ್ 'ವ್ಯಕ್ತಿ' 'ಹೆಸರ್' ಅವು ಆ ಹುಂಡಿನ ಹೊತ್ತ್‌ಕಂಡ್ ಹೊರ್ಟವೆ. ಮುಂದೆ ಅವರವರ ಅನುಕೂಲಕ್ಕೆ ತಕ್ಕಂಗೆ ಜೊತೆ ಸೇರಿ ತಿರುಪತಿಗೆ ಹೋಗಿ ಪೂಜೆ ಪುರಸ್ಕಾರ ಮಾಡಿ ಮುಡಿ( ಕೂದಲು) ಒಪ್ಪಿಸುವವು ಒಪ್ಪಿಸಿ ತಿರುಪತಿ ಸ್ವಾಮಿನ ದರ್ಶನ ಮಾಡಿ ತಲೆಲಿ ಹೊತ್ತ್ ಕಂಡಿರುವ ಹುಂಡಿ ಹಣನ ತಿರುಪತಿ ಹುಂಡಿಯೊಳಗೆ ಎಲ್ಲವು ಅದನ್ನು ಮುಟ್ಟಿ ಗೋವಿಂದ ಗೋವಿಂದಾತ್ತೇಳಿ ಸ್ವಾಮಿನ ಕರ್‌ಕಂಡ್ ಸುರ್ದವೆ. ಅಲ್ಲಿಂದ ಸ್ವಾಮಿನ ತೀರ್ಥ, ಲಡ್ಡು ಪ್ರಸಾದನ ತಕ್ಕಂಡ್ ವಾಪಾಸ್ಸ್ ಮನೆಗೆ ಬಂದವೆ. ಐನ್ ಮನೆಗೆ ಬಂದ್ ಹತ್ತಿಕೆ ಮುಂದೆ ಮನೆಲಿ ಇದ್ದವೆಲ್ಲ ಸೇರಿ ತಿರುಪತಿಂದ ತಂದ ತೀರ್ಥ ಪ್ರಸಾದನ ಪೂರ್ತಿ ಖಾಲಿ ಮುಡ್‌ಪ್ ಕಟ್ಟಿದ ಮರಲಿ ಮುಡುಪೊಟ್ಟಿಗೆ ಕಟ್ಟಿಟ್ಟವೆ. ನಂತರ ತಿರುಪತಿಗೆ ಹೋಗಿ ಬಂದವು ಮನೆಗೆ ಹತ್ತಿವೆ. ಮನೆಲಿದ್ದವು ಕೈಕಾಲು ತೊಳೆಯಕೆ ನೀರು ಚೊಂಬು ತಂದಿಟ್ಟವೆ. ಮತ್ತೆ ಒಳಗೆ ಬಾಡೆಲಿ ನೆಲ್ಲಕ್ಕಿ ದೀಪ ಹೊತ್ತಿಸಿಟ್ಟವೆ. ತಿರುಪತಿಗೆ ಹೋಗಿ ಬಂದವು, ಕೈ ಕಾಲು ಮುಖ ತೊಳ್ದ್ ಬಂದ್ ನೆಲ್ಲಕ್ಕಿ

ದೀಪಕ್ಕೆ ಕೈ ಮುಗ್ದ್ ಅಡ್ಡ ಬಿದ್ ಹೊರಗೆ ಕೈಯ್ಯಾಲೆಗೆ ಬಂದ್ ಹಿರಿಯರ ಕಾಲಿನ ಕಿರಿಯವ್ ಹಿಡ್ದ್ ಅಂದರೆ ಪಾದ ನಮಸ್ಕಾರ ಮಾಡಿವೆ. ಮತ್ತೆ ಹೋಗಿ ಬಂದವರೊಟ್ಟಿಗೆ ಕಷ್ಟ-ಸುಖ ಮಾತಾಡಿ ಕಾಫಿ ಕುಡಿಯದು ಅಥವಾ ಫಲಹಾರ ಮಾಡ್ದು ಇದ್ ಅವರವರ ಕುಟುಂಬಲಿ ಅನುಸರಿಸಿಕಂಡ್ ಬಂದಂಗೆ

# ಇದ್ ಹರಿಸೇವೆ ಮಾಡುವ ಕ್ರಮ

ಹಿಂದೆ ಹೇಳ್ದಂಗೆ ಹರಿಸೇವೆಗೆ ದಾಸ ಮುಖ್ಯ ಮಡಿವಾಳ ಮುಖ್ಯ, ಓಲಗದವು ಮುಖ್ಯ, ಮತ್ತೆ ದರ್ಶನ ಭಕ್ತರ್ ಮುಖ್ಯ, ಹಂಗೆನೆ ಅಡಿಗೆವು ಮುಖ್ಯ, ಊರ್‌ನ ಭಕ್ತರ್ ಮುಖ್ಯ. ಇವುಕೆಲ್ಲಾ ಹರಿಸೇವೆ ಕಾಗದ ಕೊಡ್‌ಕಾಕನ ಅದರೊಟ್ಟಿಗೆ ವೀಳ್ಯ , ಅಂದರೆ ಎಲೆ ಅಡಿಕೆ ಕೊಟ್ಟ್ ಬರಮಾಡಿಕಂಬ ಪದ್ಧತಿ ಅಂದ್‌ಂದ ನೆಡ್ದ್ ಬಂದುಟು. ಇಂದ್ ನಡಿಯುತ್ತುಟ್, ಇನ್ನು ಮುಂದಕ್ಕು ನಡ್ಸ್‌ಕಂಡ್ ಹೋದವೆತ್ತೇಳುವ ನಂಬಿಕೆ ಉಟ್ಟು.

01. ದಾಸಂಗೆ ವೀಳ್ಯ ಕೊಡ್‌ಕಾಕನ ದಾಸ ಕೇಳ್ದೆ ಎಷ್ಟ್ ಗುಂಡತ್ತೇಳಿ. ಅದಕ್ಕೆ ತಕ್ಕಂಗೆ ದಾಸ ಪಟ್ಟಿ ಕೊಟ್ಟದೆ ಆ ಪಟ್ಟಿಯಂಗೆ ಆ ಕುಟುಂಬಸ್ಥರ್ ನಡ್‌ಕಣಕು.

02. ಮಡಿವಾಳ (ಅಗಸ, ಡೋಬಿ) ಇವ್‌ಕೆ ವೀಳ್ಯ ಕೊಡ್‌ಕಾಕನ ಮಡಿವಾಳ ಕೇಳ್ದೆ ಎಷ್ಟ್ ಗುಂಡ , ಎಷ್ಟ್ ಜನ ಭಕ್ತರ್, ಮತ್ತೆ ಎಷ್ಟು ಜನ ದರ್ಶನ ಭಕ್ತರ್‌ತ್ತೇಳಿ. ಯಾಕೆತ್ತೇಳ್ರೆ ಆ ಭಕ್ತರಿಗೆಲ್ಲಾ ವ್ಯಿಯ್ದ್ ಉಡಿಕೆ ಮಡಿ ಪಂಚೆನ ಅವು ಕೊಡಕು. ಮತ್ತೆ ಗುಂಡ ಎಷ್ಟುತಾ ಕೇಳ್ದು ಯಾಕೆತ್ತೇಳ್ರೆ ಪ್ರತಿಯೊಂದು ಗುಂಡದ ಮುಂದ್‌ಗಡೆ ಹಾಕಿದ ಚಪ್ಪರಕ್ಕೆ ಗುಂಡಕ್ಕೊಂದ್

ಮೇಲ್ಕಟ್ ಕಟ್ಟಕು. ಈ ಬಟ್ಟೆನ ಸಹ ದೋಬಿ ಕೊಡಕು ಮತ್ತೆ ದರ್ಶನ ಭಕ್ತರ್ ಎಷ್ಟತಾ ಕೇಳ್ದು ಯಾಕೆ ಗೊತ್ತಾ. ಪ್ರತಿಯೊಬ್ಬ ದರ್ಶನ ಭಕ್ತರ್ ಹಾರ್‌ಕಚ್ಚೆ ಹಾಕಿಕೆ. ಜೋಡು ಪಂಚೆನ ಡೋಬಿನೇ ಕೊಡಕು. ಮತ್ತೆ ಮಡಿ ಹಾಸಿಕೆ ಬಟ್ಟೆ ತರಕು. ಘನ ಹರಿಸೇವೆಯಾದರೆ ಗಾವ್‌ಬೀಳಿಕೆ, ತೆರೆ ಮರೆ ಹಿಡಿಯಕೆ ಬಟ್ಟೆ ಡೋಬಿ ತರಕಕು. ಹಂಗೆನೆ ಗಾವ್ ಬೀಳ್‌ಕಕನ ಕೆಂಚರಾಯಂಗೆ ದೊಂದಿ ಬೀಸಿಕೆ 2 ದೊಂದಿ ಸಹ (ದೋಬಿ) ಮಡಿವಾಳನೆ ಮಾಡಿ ತರಕು. ಚಪ್ಪರನ ಅಲಂಕಾರ ಮಾಡ್ದು ಮನೆಯವ್ರು, ಓಲಗದವ್ರುಕೆ ವೀಳ್ಯ ಕೊಡಕು. ಆಗ ಅವ್ ಕೇಳಿವೆ ಘನ ಹರಿಸೇವೆ ಅಥವಾ ಬಿಡು ಹರಿಸೇವೆತ್ತೇಳಿ. ಯಾಕೆತ್ತೇಳ್ರೆ ಘನ ಹರಿಸೇವೆಲಿ ಸ್ವಾಮಿಯ ಬಲ ಬಂಟನಾದ ಕೆಂಚಿರಾಯನ ರೂಪುನ ಹೊತ್ ಮಿಯ್ಯಕ್ಕೆ ಹೋಗಿ ಬಾಕೆ ಬಹಳ ಹೊತ್ತು ಹಿಡ್ದದೆ. ಬಿಡು ಹರಿಸೇವೆಲಿ ಈ ಪದ್ಧತಿ ಇಲ್ಲದರಂದ ಅವರ ಮುಂದಿನ ಅನುಕೂಲತೆಗಾಗಿ ಕೇಳಿ ತಿಳ್ಕಂಡವೆ. ಹರಿಸೇವೆಲಿ ಹರಿಸೇವೆ ದಿನದಂದ್ ಎಲ್ಲಾ ಕೆಲಸ ಕಾರ್ಯಗಳ್ನ ಮಾಡಿಕೆ ಭಕ್ತರ್ ಬೇಕಾಗಿದ್ದವೆ. ಕುಟುಂಬದ ಪಟ್ಟೆದಾರ ಮತ್ತೆ ಗೊನೆ ಕಡ್ಡವ್ ಭಕ್ತರಾಗಿನಿಲ್ಲಕು. ಅವರೊಟ್ಟಿಗೆ ತಿರುಪತಿಗೆ ಹೋಗಿ ಬಂದ ಭಕ್ತನೊಬ್ಬ ಭಕ್ತನಾಕು. ಊರ್‌ಂದ ಒಬ್ಬ ಅಥವಾ ಇಬ್ಬರು ಭಕ್ತರ್ ಬೇಕು. ಈ ಊರ್ ಭಕ್ತರಿಗೆ ಮತ್ತೆ ದರ್ಶನ ಭಕ್ತರಿಗೆ ವೀಳ್ಯ ಕೊಟ್ಟು ಕರಿಸಿಕಣಕು. ಇವೆಲ್ಲಾ ಸೇರ್ದಂಗೆ ಒಂಭತ್ತು ಅಥವಾ ಹನ್ನೊಂದು ಜನ ಭಕ್ತರ್ ಅಥವಾ ವಿಷಮ ಸಂಖ್ಯೆಲಿ ಭಕ್ತರನ್ನ ಹೆಚ್ಚ್ ಕಡಿಮೆ ಮಾಡಿ ಕಂಬದು. ಆ ಕುಟುಂಬಕ್ಕೆ ಸಂಬಂಧಪಟ್ಟದ್ ಬಿಡ್ ಹರಿಸೇವೆನ ಹಗಲ್ ಮತ್ತು ರಾತ್ರಿ ಮಾಡಿವೆ. ಆದರೆ ಘನ ಹರಿಸೇವೆ ಮಾತ್ರ ರಾತ್ರಿಯೇ ಮಾಡ್ವ ಪದ್ಧತಿ.

ದಾಸ ಬಂದ್ ಐನ್ ಮನೆಲಿ ಕುದ್ದದೆ ತಿರಿಮಂತ್ರ

ಹಾಕಂಡ್ ಶಂಖ, ಜಾಗಟೆ ಮೂರು ಸಲ ಊದಿದೆ (ಉರ್‌ಗಿದೆ) ಇಲ್ಲಿಂದ ಹರಿಸೇವೆ ಸುರು ಆದೆ. ಕುಟುಂಬದವ್ ಸೇರಿವೆ. ದಾಸಂಗೆ ಕಾಫಿ ಕೊಟ್ಟವೆ. ಗುಂಡಕ್ಕೆ ಬೇಕಾದ ಬಾಳೆ ದಂಡ್‌ಗ, ಬೆದರ್‌ಕಡ್ಡಿ, ಬಾಳೆಲೆ, ಗುಂಡ ನಿಲ್ಲಿಸಿಕೆ ಅನುಕೂಲದ ಜಾಗ ಬೆಂಚಿ ಇಟ್ಟ್ ಸರಿ ಮಾಡಿಕೊಡಕು. ಮತ್ತೆ ಗುಂಡಕ್ಕೆ ಬೇಕಾದ ಕಾಯಿ ಕುತ್ತ ಮುಳ್ ಚೊಂಬುಗ, ಬಿಂದಿಗೆ,ಪಾನಕ ಮಡಿಕೆ, ಬೆಲ್ಲ, ಒಳ್ಳೆಮಣಸ್ ಕುಟ್ಟಿಕೆ ಕಲ್ಲ್, ಗುಂಡಕ್ಕೊಂದು ಸ್ವಾಮಿ ಫೋಟೊ, ಮತ್ತೆ ಗುಂಡಕೆ ತಕ್ಕಂಗೆ ಮಣ್ಣ್‌ನ ದೀಪಗ, ಕಾಲ್ ದೀಪಗ, ಅಕ್ಕಿ– ತೆಂಗಿನಕಾಯಿ, ನಾಮದ ಕಡ್ಡಿ, ಕುಂಕುಮ, ಸಾಂಭ್ರಾಣಿ ಬತ್ತಿ, ಎಲೆ ಅಡಿಕೆ, ಎಣ್ಣೆ ಚೆರ್‌ಕ್, ತೆಂಗಿನ ಎಣ್ಣೆ, ಗುಂಡಗಳ ಅಲಂಕಾರಕ್ಕಾಗಿ ಬೇಕಾದಷ್ಟು ಹೂ, ಹೂ ಮಾಲೆ, ತುಳಸಿ, ಹೂ ಮತ್ತೆ ಕೊಡಿ, ಹಾಲು ಗೋಮೂತ್ರ, ಗೋಮಾಯ ಭಕ್ತರಿಗೆ ಹಾಕಿಕೆ ಮೂ ಮಾಲೆಗ ಒಂದೆರಡ್ ಗಂಜಿಗ , ಎಲೆತಟ್ಟೆಗ ಕಬ್ಬು ಮತ್ತೆ ಕೆಂಚಿರಾಯನ ಪೂಜೆಗೆ ಕೊಂದೆಸೊಪ್ಪು (ಬ್ಯಾಟೆ ಸೊಪ್ಪು) ಅಕ್ಕಿ, ಭತ್ತ, ತೌಡ್, ಗಡಿಗೆ (1 ಗ್ಲಾಸ್ ಕಳ್)_ ಶ್ಯಾವೆಕೋಲ್, ಇಷ್ಟ್ ದಾಸನಹತ್ತಿರ ಕೊಟ್ಟು ಬಿಡಕು. ಅದಲ್ಲದೆ ಕಳಸಕ್ಕೊಂದು ಚೆಂಬು, ಮತ್ತೆ ಚಿಲ್ಲರೆ ದುಡ್ಡು ಕೊಟ್ಟುಬುಡಕು. ಅಷ್ಟುಹೊತ್ತಿಗೆ ಊರ್‌ನ ಭಕ್ತರ್ ಮಡಿವಾಳ (ಡೋಬಿ) ದರ್ಶನ ಭಕ್ತರ್ ಬಂದವೆ. ದಾಸನೊಟ್ಟಿಗೆ ಭಕ್ತರೆಲ್ಲ ಸೇರಿಕೊಂಡ್ ಗುಂಡಕಟ್ಟಿ ಗುಂಡನ ಗೊತ್ತ್‌ಪಡಿಸಿದಲ್ಲಿ ಇಟ್ಟವೆ. ಅಷ್ಟ್‌ಹೊತ್ತಿಗೆ ಸರಿಯಾಗಿ ಓಲಗದವು ಬಂದವೆ. ಅವುಕೆ ಪೂಜೆ ಸಾಮಾನ್ ಮತ್ತೆ ಕಾಫಿ ಕೊಟ್ಟ ಮ್ಯಾಲೆ ಅವು ವಾದ್ಯ ಮಾಡಿಕೆ ಸುರುಮಾಡುವೆ. ಇದೆಲ್ಲಾ ಆದ ಮ್ಯಾಲೆ ಗುಂಡದ ಮುಂದೆ ಅಂಗಳ ಗುಡ್‌ಸಿ ಸಗಣಿ ನೀರ್ ಹಾಕಿ ಶುದ್ಧ ಮಾಡುವೆ.

ಮುಂದೆ ದಾಸನ ಕೆಲಸಕಾರ್ಯಗ ದಾಸ ಪಟ್ಟೆದಾರನ ಕರ್‌ದದೆ. ದೋಬಿ ಮೇಲ್ಕಟ್ ಕಟ್ಟಿದೆ. ಒಂದು ಚೊಂಬ್

ನೀರ್ ಹಿಡ್ಕಂಡ್ ಪಟ್ಟೆದಾರರು ಕರ್ದವೆ. ಭಕ್ತರ್ ಬಂದ್ ಫಲಹಾರ ಮಾಡಕುತ್ತೇಳುವೆ. ಹಂಗೆನೆ ಭಕ್ತರಿಗೆ ಫಲಹಾರ ಮಾಡಿಕ್ಕಾಗಿ ಗುಂಡದ ಎದುರ್‌ಗಡೆ ಚಾಪೆಗಳ್ನ ಹಾಕಿದ್ದವೆ. ದಾಸನ ಹತ್ತಿರ ಒಂದು ಚೊಂಬು ನೀರ್, ಮತ್ತೆ ಗೋಮಾಯ (ಸಗಣಿ) ಮುದ್ದೆನ ಕೊಟ್ಟಿದ್ದವೆ. ಈ ಭಕ್ತರಿಗೆ ಫಲಹಾರತ್ತೇಳಿರೆ ಇಡಮನೆ ಹಿಟ್ಟ್, ಕಾಯಿಹಾಲ್, ಇದನ್ನ ಆ ಕುಟುಂಬದ ಸೂತಕ ಇಲ್ಲದ (ಅಂದರೆ ಹೊಲೆ ಇಲದಂತ) ಹೆಣ್ಣ್ ಜನ ಮಾಡೋಕು. ಅವು ಶುದ್ಧ ಮುದ್ರಿಕೆಲಿ ಇದ್ದ್ ಅವೆ ಬಳ್‌ಸಕು. ಅಥವಾ ಶುದ್ಧ ಮುದ್ರಿಕೆಲಿ ಇರುವ ಗಂಡಸರ್ ಬಳಸಕ್ (ಇಕ್ಕಕ್) ಈ ಭಕ್ತರ್ ಬೇಕಾದಷ್ಟು ಫಲಹಾರ ಮಾಡಿ ಕಣಕು. ಕಾರಣತ್ತೇಳಿರೆ ಹರಿಸೇವೆಯ ಕಾರ್ಯಕ್ರಮ ಪೂರ್ತಿ ಮುಗಿಯುವವರೆಗೆ ಯಾವುದೇ ತರದ ಫಲಹಾರನ ಅವ್‌ಕೆ ಕೊಡ್ದುಲೆ.

ಫಲಹಾರ ಸುರ್ ಮಾಡಿಕೆ ಮುಂದೆ ಫಲಹಾರಕ್ಕೆ ಇಕ್ಕಿದಂತಹ ಎಲ್ಲಾ ವಸ್ತುಗಳನ್ನ ಮತ್ತೆ ಬಾಳೆಹಣ್‌ನ ಸ್ವಲ್ಪ ತೆಗ್ದ್ ಕಲ್ಸಿ ಅವ್ ಊಟ ಮಾಡುವ ಕೊಡಿ ಬಾಳೆಲೆ ತುದಿಲಿ ಇಟ್ಟ್‌ಕಂಡ್ ಒಂದು ಚೆಂಬು ನೀರ್ ತಕ್ಕಂಡ್ ಆ ಎಲೆ ಸುತ್ತು ಹಾಕಂಡ್ ಮತ್ತೆ ಫಲಹಾರ ಸುರ್ ಮಾಡ್ದು. ಈ ಫಲಹಾರ ಆದ ಮೇಲೆ ಮತ್ತೆ ಹರಿಸೇವೆ ಮುಗಿಯುವವರೆಗೆ ಅವ್‌ಕೆ ಯಾವುದೆ ತರಹದ ಉಪಹಾರ ಆಗಲಿ ಕುಡಿಯಕ್ಕಾಗಲಿ ಕೊಡ್ದುಲೆ. ಒಂದ್ ವೇಳೆ ಕುಡ್ದೆ ಕುಡಿಯೋಕುತ್ತೇಳಿ ಆದಂತಹ ಭಕ್ತಂಗೆ ಪಾನಕನ ಮಾತ್ರ ಕುಡಿಯಕೆ ಕೊಟ್ಟವೆ. ಇದ್ ಭಕ್ತರಿಗೆ ಮಾತ್ರ ಅನ್ವಯಿಸಿದೆ. ಫಲಹಾರ ಆದ ಮೇಲೆ ದಾಸ ಗೋಮಯನ ತನ್ನ ಬಲಗಡೆಗೆ ಉರುಳಿಸಿದೆ. ಹಂಗೆನೆ ಉಳ್ದ ಭಕ್ತರ್ ಗೋಮಯ ಉರುಳಿಸಿ ಆದ ಮೇಲೆ ಎದ್ದವೆ. ಗುಂಡ ಮುಂದುಗಡೆನ ಗುಡ್ಸಿ ಸಗಣಿ ನೀರ್ ಹಾಕಿ ಶುದ್ದಗೊಳ್ಸಿವೆ. ನಂತರ ಹರಿಸೇವೆಗೆ ಬಂದ ಸರ್ವ ಭಕ್ತಾಧಿಗಳಿಗೆ ಊಟೋಪ ಚಾರನ ಮಾಡ್ಸಿವೆ.

ಭಕ್ತರದ್ ಊಟ ಆದ ಮೇಲೆ ದಾಸ ಪಟ್ಟೆದಾರನ ಕರ್‌ದದೆ. ಪಟ್ಟೆದಾರ ಒಂದು ಚೊಂಬು ನೀರ್ ಮತ್ತೆ ಒಂದು ಎಲೆತಟ್ಟೆಲಿ ಎಲೆ ಅಡಿಕೆ ಹಿಡ್ಕಂಡ್ ಭಕ್ತರ್‌ನ ಕರ್ದ್ ಭಕ್ತರ್ ಬಂದ್ ಎಣ್ಣೆ ತಕೊಣಕುತ್ತೇಳಿವೆ. ದಾಸ ಗುಂಡಂದ ಮುಂದೆ ಕುದ್ಕಂಡ್ ಪಟ್ಟೆದಾರಂಗೆ ದರ್ಶನ ಭಕ್ತರಿಗೆ, ಮತ್ತೆ ಭಕ್ತರಿಗೆ ಎಣ್ಣೆ ಕೊಟ್ಟದೆ. ದಾಸ ತೆಂಗಿನ ಎಣ್ಣೆ, ಸ್ವಾವೆಕೋಲುಗಳಿಗೆ ಸಹ ತುಂಬಾ ಹಾಕಿದ್ದದೆ. ಅವು ಎಣ್ಣೆ ತಕ್ಕಂಡ್ ಆದ ಮೇಲೆ ಒಂದು ಬಿಂದಿಗೆ, ಒಂದು ಚೆಂಬು, ಎಲೆತಟ್ಟೆ, ಮಣೆ, ಒಂದು ಪಾನಕ ಪಾತ್ರೆ ಸಮೇತ ಮಿಯಕೆ ಹೋದವೆ. ಇದ್ ಹೊಳೆ, ತೋಡು ಅಥವಾ ಗೊತ್ತುಪಡಿಸಿದ ಜಾಗಲಿ ಮಿಯ್ದ್ ಅಲ್ಲಿ ಡೋಬಿ (ಮಡಿವಾಳ) ಮಡಿಬಟ್ಟೆಗಳ್ನ ಭಕ್ತರಿಗೆ ಕೊಟ್ಟವೆ. ಅಲ್ಲಿ ಈ ಮಡಿ ಬಟ್ಟೆನ ಕೊಟ್ಟದೆ. ಈ ಮಡಿ ಬಟ್ಟೆನ ಮಿಯ್ದ್ ಉಟ್‌ಕಂಡ್ ಒಂದ್ ಬಿಂದಿಗೆಲಿ ನೀರ್ ಹತ್ರದ ಬಾವಿಂದ ತಕ್ಕ್ಂಡ್ ಪಾನಕದ ಮಡಿಕೆ ತೊಳ್ದ್ ಇನ್ನೊಂದ್ ಚೆಂಬು ನೀರ್ ಹಿಡ್ಕ್ಂಡ್ ಗುಂಡ ಕಟ್ಟಿದಲ್ಲಿಗೆ ಬಂದವೆ.

ಭಕ್ತರ್ ಮಿಯ್ದ್ ಬಾಕಕನ ದರ್ಶನ ಭಕ್ತರಿಗೆ ಹಾರ್‌ಕಚ್ಚೆ ಹಾಕಿದ್ದವೆ. ಹಾರ್‌ಕಚ್ಚೆತ್ತೇಳಿರೆ ಜೋಡು ಪಂಚೆನ ಎರಡ್ ಕಾಲ್‌ಗಳ ಮಧ್ಯೆ ಸೇರಿಸ್‌ಕಂಡ್ ಉಡುವಂತದ್. ಇದ್ ಬ್ರಾಹ್ಮಣರು (ಹಾರವಯ್ಯ) ಹಾಕುದ ರಂದ ಹಾರ್ಪ್ ಬ್ಯೇತ್ತೆಳಿವೆ. ದಾಸ ದರ್ಶನ ಭಕ್ತರಿಗೆ ತಿರುಪತಿ ನಾಮ ಹಾಕಿದೆ, ಹೂಮಾಲೆ, ತುಳಸಿ ಮಾಲೆ ಹಾಕಿದೆ, ಮತ್ತೆ ಭಕ್ತರಿಗೆಲ್ಲ ತಿರುಪತಿ ನಾಮ ಹಾಕಿದೆ. ಅದೂ ಅಲ್ಲದೆ, ಅಲ್ಲಿ ಕೂಡಿದ್ದ ಭಕ್ತರಲ್ಲಿ ಆ ವರ್ಷದಲ್ಲಿ ತಿರುಪತಿಗೆ ಹೋಗಿ ಬಂದಿದ್ದ ಭಕ್ತರಿಗೆ ಅವುಕೆ ಸಹ ನಾಮದ ಬೊಟ್ಟ್. ಹೂ ಮಾಲೆ ಹಾಕಿದೆ. ಆದುದರಿಂದ ಒಬ್ಬೊಬ್ಬ ಭಕ್ತರ್ ಒಂದೊಂದು ಕೆಲಸ ಹಂಚಿಕಂಡ್ ದಾಸನೊಟ್ಟಿಗೆ ಸೇರಿಕಂಡ್ ಗುಂಡನ ಅಲಂಕಾರಮಾಡ್ದು, ಪಾನಕ, ಪ್ರಸಾದ ಮಾಡ್ದು ಹಂಗೆನೆ ಹರಿಸೇವೆಗೆ

ಸಂಬಂಧಪಟ್ಟ ಎಲ್ಲ ಕೆಲಸ ಕಾರ್ಯಗಳ್ನ ಮಾಡಿ ದೀಪಾಲಂಕಾರ ಮಾಡಿ ಆದ ಮ್ಯಾಲೆ ಆರತಿ ಬೆಳಗಿ ಕೊಡಿ ಬಾಳೆಲೆಲಿ ದೀಪ ಅಥವಾ ನೆಣೆ (ಬತ್ತಿ ಹೊತ್ತಿಸಿ) ತೆಂಗಿನಗಡಿಗಳ್ನ ಇಟ್ಟ್ ಹೂ ಪ್ರಸಾದ ಇಟ್ಟ್, ಪಟ್ಟೆದಾರನ ಕರ್ದ್ ಮುಡ್‌ಪು ಮತ್ತೆ ಬಾಳೆಗೊನೆ ತಕ್ಕಂಡ್ ಬಾಕೆ ಹೇಳಿ ಈ ಕೊಡಿ ಬಾಳೆಲೆನ ಪಟ್ಟೆದಾರನ ಕೈಗೆ ಕೊಟ್ಟದೆ. ಗೋವಿಂದಾ, ಗೋವಿಂದಾ, ಗೋವಿಂದಾತ್ತೇಳಿ ಎಲ್ಲವೂ ಸ್ವಾಮಿನ ಕರ್ದವೆ. ದಾಸ ಶಂಖ, ಜಾಗಟೆ ಹಿಡ್‌ದದೆ. (ಶಂಕ ಊದಿಕಂಡ್ ಜಾಗಟೆ ಹೊಡ್ದದೆ) ಒಡ್ಡೋಲಗ ಸುರು ಆದೆ. ಆಗ ಅಲ್ಲಿದ್ದ ದರ್ಶನ ಭಕ್ತರ ಮೈ ನಡ್‌ಗಿದೆ. ಆವೇಶ ಬಂದದೆ. ಹಂಗೆನೆ ಗೋವಿಂದಾ ನಾಮಾವಳಿ ಹೇಳಿಕಂಡ್ ಮುಡ್‌ಪು ಮತ್ತೆ ಬಾಳೆಗೊನೆನ ಬಿಚ್ಚಿಕಂಡ್ ಬಂದವೆ. ಇದ್ ತಿರುಪತಿಗೆ ಹೋಗದೆ ಹರಿಸೇವೆ ಮಾಡ್‌ಕಾಕನ ಮಾತ್ರ.

ತಿರುಪತಿಗೆ ಹೋಗಿ ಮುಡ್‌ಪುನ ಹಾಲ್ ಬರುವ ಮರಲಿ ಅಥವಾ ಚಾಳೆಮರ (ತೆಂಗಿನ ಮರ) ಲಿ ತಿರುಪತಿ ಪ್ರಸಾದ ಸಮೇತ ಕಟ್ಟಿ ಮುಡ್‌ಪುನ ತಾದಾದರೆ ಸುರ್‌ಲಿ (ಸುರುಗೆ) ಅಟ್ಟಕ್ಕೆ ಹೋಗಿ ಅಟ್ಟಲಿ ಕಟ್ಟಿದ ಬಾಳೆಗೊನೆನ ಬಿಚ್ಚಿ ತಂದ್ ಅಂಗಳಕ್ಕೆ ಅಂದರೆ ಚಪ್ಪರದಡಿಗೆ ಬಂದ್ ಗೊನೆ ಇಟ್ಟ್ ಶಂಖ, ಜಾಗಟೆ, ಒಡ್ಡೋಲಗಲಿ ಮುಡ್‌ಪು ಇದ್ದ ಜಾಗಕ್ಕೆ ಹೋಗಿ ಗಂಗೆ ಪೂಜೆ ಮಾಡಿ ಆ ಮುಡ್‌ಪು ಮತ್ತೆ ಪ್ರಸಾದನ ತಕ್ಕಂಡ್ ಬಂದ್ ಗುಂಡ ಮುಂದೆ ಕೊಡಿ ಬಾಳೆಲಿ ಹಾಕಿ ಅದರ ಮ್ಯಾಲೆ ಮುಡ್‌ಪು ಇಟ್ಟವೆ. ಇದಾದ ಮ್ಯಾಲೆ ದಾಸನ ಪದ್ಧತಿ ಪ್ರಕಾರ ಗುಂಡ ತುಂಬಿಸಿ ಕಳಸ ಇಟ್ಟ್ ಚೊಂಬುಗಳಿಗೆ ಕುಟುಂಬದ ಗುಂಡಕ್ಕೆ ಪಟ್ಟೇದಾರ, ಹರಿಕೆ ಗುಂಡಕ್ಕೆ ಹಂಗೆನೆ ಭಕ್ತಿ ಗುಂಡಕ್ಕೆ ಭಕ್ತಿಯಿಂದ ಕಟ್ಟಿಸಿದ ಭಕ್ತರ ಕೈಯಿಂದ ಚಿಲ್ಲರೆ ದುಡ್ಡು ಹಾಕಿಸಿ ಗುಂಡದ ಮೇಲೆ ಕಳಸ ಇಟ್ಟದೆ. ಇನ್ನ್ ಕೆಲವು ಕುಟುಂಬಲಿ ಸಬ್ಬಮದೇವರ್ನ ಸಹ ಪೂಜಿಸಿವೆ. ಇದ್

ನಮ್ಮ ಕುಟುಂಬಲಿ ಇರುವ ಪದ್ದತಿ. ಇಲ್ಲಿ ನಾವ್ ಮದುವೇಲಿ ಗೌಡ ಜನಾಂಗದ ಪೂರ್ವ ಪದ್ಧತಿಯಂಗೆ ಹೈದ (ಹುಡುಗ) ಗೂಡೆ (ಹೆಣ್ಣ್) ಅಂದರೆ ಮಧುಮಕ್ಕಳ ಕೈಯಿಂದ ಹರಕೆ ಹಣ (ಕಾಣಿಕೆ ಹಣ) ಕಟ್ಟುದು ನಡ್‌ದ್ ಬಂದಂತದ್. ಇದರ್‌ನ ನೆಲ್ಲಕ್ಕಿ ಬುಡಲಿ ಅಂದರೆ ನೆಲ್ಲಕ್ಕಿ ಎದುರ್‌ಗಡೆ ಮಧುವಣ ಅಥವಾ ಮಧುವಳಿಗೆನ ನಿಲ್ಲಿಸಿಕಂಡ್ ಸ್ವಾಮಿಯ ಹೆಸರೇಳಿ ಅಥವಾ ಸಬ್ಬಮ್ಮದೇವಿಯ ಹೆಸರೇಳಿ ಹರಕೆ ಹಣ ಕಟ್ಟ್‌ವ ಪದ್ಧತಿಲಿ ಹರಕೆ ಹಣ ಕಟ್ಟುದು. ಹಂಗೆನೆ ಸಬ್ಬಮ್ಮ ದೇವರ್‍ನ ಸಹ ಪೂಜಿಸಿಕಂಡ್ ಬಾದು. ಅದ್‌ಕ್ಕಾಗಿ ತಾಯಿ ಸಬ್ಬಮ್ಮದೇವರ ಹೆಸರೇಳಿ ನಾವ್ ಒಂದ್ ದಳಿ ಕಟ್ಟ್‌ವೆ. ಈ ದಳಿತ್ತೇಳಿರೆ ಸ್ವಾಮೀಗೆ ಬಾಳೆರಟ್ಟೆ (ತಟ್ಟೆ) ಯಿಂದ ಕಟ್ಟುವ ಗುಂಡ ಅಲ್ಲಿ ಇದನ್ನ ದಾಸ ಕಟ್ಟ್‌ದುಲೆ. ದಾಸ ಕಟ್ಟಿದ ಗುಂಡದ ಕೊನೆಯ ಭಾಗಲಿ ಅಂದರೆ ಗುಂಡಕ್ಕೆ ಮುಖಮಾಡಿ ನಿಂತರೆ ದಾಸನ ಬಲಭಾಗದ ಕೊನೆಲಿ ಕುಟುಂಬದವು ಸೇರಿ ಕಟ್ಟುವ ದಳಿ. ಇದರ ಅಲಂಕಾರ ಮಾತ್ರ ಗುಂಡದ ಅಲಂಕಾರ. ಹಿಂದೆ ಹೇಳ್ದಂಗೆ ಹರಿಸೇವೆಲಿ ಎರಡ್ ತರದ ಹರಿಸೇವೆ. 1. ಬಿಡು ಹರಿಸೇವೆ 2. ಘನ ಹರಿಸೇವೆ. ಇಲ್ಲಿಯವರೆಗೆ ಮಾಡಿಕಂಡ್ ಬಂದಂತ ಪದ್ದತಿ ಎರಡ್ ಹರಿಸೇವೆಗಳಿಗೂ ಒಂದೇ ತರ.

ಘನಹರಿಸೇವೆ ಆದರೆ ದಾಸ ಹೇಳ್ದೆ ನಿಮ್ಮ ಮನೆ ಪದ್ದತಿ ಪ್ರಕಾರ ಸ್ವಾಮಿ ಪೂಜೆ ಆದ ಮೇಲೆ ಜಳಕಕ್ಕೆ ಹೋದ ಅಥವಾ ಪೂಜೆ ಸುರ್ ಮಾಡಿಕೆ ಮುಂದೆ ಜಳಕಕ್ಕೆ ಹೋದೊತ್ತೇಳಿ ಅವರರವರ ಮನೆ ಪದ್ದತಿಗಳಂಗೆ ಹೇಳಿಕಂಡವೆ. ಆದರೆ ನ್ಮಮ ಮನೆ ಪದ್ದತಿ ಪ್ರಕಾರ ಸ್ವಾಮಿಯ ಎಡಬಲ ಬಂಟರಾದ ಕೆಂಚಿರಾಯ, ಕರಿರಾಯನ ಶುದ್ದ ಮಾಡಿ ನಾವೆಲ್ಲ ಮೀಯ್ದ್ ಬಂದ್ ಎಲ್ಲವು ಪೂಜೆಗೆ ನಿಲ್ಲುದು. ಅಂತಃ ಸಮಯಲಿ ಸದಾ ಸ್ವಾಮಿ ಸನ್ನಿದಿಯಲ್ಲಿರುವಂತ ಕೆಂಚರಾಯ ಕರಿರಾಯಂಗೆ ಸ್ನಾನ

ಇಲ್ಲದೆ ಪೂಜೆಗೆ ಕರೆಯದು ಸರಿಯಲ್ಲ. ಅವು ಸಮೇತ ಶುದ್ದ ಮುದ್ರಿಕೆಯಿಂದ ಸ್ವಾಮಿ ಬಳಿ ಇದ್ದ ಭಕ್ತಾಧಿಗಳಿಗೆಲ್ಲಾ ಸ್ವಾಮಿ ಕೊಡುವಂತ ಮುತ್ತಪ್ಪಣೆಗಳ್ನ ಪೂರೈಸಿ ಕೊಡಲಿತ್ತೇಳುವ ಅಭಿಪ್ರಾಯಂದ ಹರಿಸೇವೆ ಪೂಜೆ ಸುರ್ ಮಾಡಿಕೆ ಮೊದಲೆ ಜಳಕಕ್ಕೆ ಹೋಗಿ ಬರುವಂತ ಪದ್ದತಿ ಇಟ್ಟ್‌ಕಂಡ್ ಅದ್‌ರಂಗೆ ನಡ್ಸ್‌ಕಂಡ್ ಬರುತ್ತೊಳೊ. ಇದರಂತೆ ಅರೆಭಾಷೆ ಅಕಾಡೆಮಿಯವು ಸಹ ಸರ್ವಗೌಡ ಬಾಂದವುಗೆ ತಿಳಿಸಿ ಎಲ್ಲವು ಒಂದೇ ಪದ್ದತಿಲಿ ಆಚರಿಸಿಕಂಡ್ ಬರೋನಾತ ನನ್ನ ಅಭಿಪ್ರಾಯನ ನಮ್ಮ ಅಕಾಡಮಿಯ ಮುಂದಿಡುತೊಳೆ.

ಈಗ ನಮ್ಮ ಮನೆಲಿ ಪ್ರತಿ ಐದ್ ವರ್ಷಕ್ಕೊಮ್ಮೆ ನಡ್ಸಕಂಡ್ ಬರುವಂತ ಪದ್ದತಿಲಿ ಜಳಕಕ್ಕೆ ಹೋಗುವ ಪದ್ದತಿನ ಈ ಕೆಳಗಿನಂಗೆ ಗೌಡ ಭಾಂಧವರ ಗಮನಕ್ಕೆ ತರುತೊಳೆ.

"ಕೆಂಚಿರಾಯನ ಜಳಕ" ಕುಟುಂಬಸ್ಥರ್ ಒಪ್ಪಿಗೆಯಂಗೆ ಐನ್‌ಮನೆಯಿಂದ ಸುಮಾರ್ ದೂರಲಿ ನೀರ್ ಜಳಕಕ್ಕೆ ಸರಿಯಾಗಿ ಸಿಕ್ಕುವ ಜಾಗಲಿ, ಹಂಗೆನೆ, ನೆರೆದಂತ ಅಂದರೆ ಸೇರಿದಂತ ಭಕ್ತರಿಗೆ ಎಲ್ಲವು ಸಮೇತ ಸ್ವಾಮಿಯ ಜಳಕದ ಕಾರ್ಯಕ್ರಮನ ನೋಡಿ ಖುಷಿ ಪಡುವಂತ ಎಲ್ಲವು ಸರಿಯಾಗಿ ಓಡಾಡಿಕೆಯಾಗುವಂತ ದಾರಿ ಮತ್ತೆ ಬೆಳಕ್‌ನ ಸಲಕರಣೆ ಇರುವಂತ ಜಾಗಲಿ ಒಂದು ಚಪ್ಪರ ಹಾಕಿದ್ದವೆ. ಗುಂಡಲಿ ಮಡಗಿದ್ದ ಶ್ಯಾವೆ ಕೋಲ್‌ನ ದರ್ಶನ ಭಕ್ತರ ಕೈಲಿ ಕೊಟ್ಟಿದ್ದವೆ. ಒಂದು ತಟ್ಟೇಲಿ ಸ್ವಾಮಿಯ ವಿಗ್ರಹ, ವೀಳ್ಯದೆಲೆ, ತೆಂಗಿನಕಾಯಿ, ಮಡ್‌ಗಿ ಆ ಕುಟುಂಬದವು ಒಪ್ಪಿಕಂಡ್ ಒಬ್ಬ ಕುಟುಂಬದ ಭಕ್ತಂಗೆ ಹಾರ್‌ಕಚ್ಚೆ ಹಾಕಿ ಪೇಟ ಹಾಕಿ ಹೂಮಾಲೆ ಮಧುವಣನಂಗೆ ಅಲಂಕಾರದ ಸಾಲ್ ಹಾಕಿ ಚಿನ್ನಾಭರಣಗಳ್‌ಂದ ಅಲಂಕಾರ ಮಾಡಿಕಂಡ್ ಆ ವಿಗ್ರಹ ಹೊರುವ ಭಕ್ತನ ತಲೆ ಮ್ಯಾಲೆ ದಾಸ ಮಡುಗಿದೆ. ಗೋವಿಂದ, ಗೋವಿಂದ, ಗೋವಿಂದಾ ತಿರುಪತಿ ವೆಂಕಟರಮಣ ಸ್ವಾಮಿ

ಪಾದಾರ್‌ವಿಂದಕ್ಕೆ ಗೋವಿಂದ  ಮೂರು ಲೋಕದ ಒಡೆಯನ ಪಾದಾರವಿಂದಕ್ಕೆ ಗೋವಿಂದ ಗೋವಿಂದತ್ತೇಳಿ ಎಲ್ಲಾ ಭಕ್ತಾದಿಗ ದೇವರ್‍ನ ಕರ್‌ಕಂಡ್  ಜಳಕಕ್ಕೆ ಓಡ್ಡೋಲಗ ಶಂಖ ಜಾಗಟೇಲಿ ಹೋದವೆ. ಇವರೊಟ್ಟಿಗೆ  ಎರಡ್ ಕಂಚಿಮಿ ಇದ್ದದೆ. ಅಲ್ಲಿ ಹಾಕಿದ ಚಪ್ಪರದೊಳಗೆ ಸ್ವಾಮಿ ವಿಗ್ರಹನ ಹೊತ್ತ್ ತಂದ್ ಇಟ್ಟ್ (ಮಡ್‌ಗಿ) ಭಕ್ತರಾಗಿ ನಿಂತವೆಲ್ಲವು ನೀರ್‌ಲಿ ಮುಳ್‌ಗಿ ಮೀಯ್ದವೆ. ಮತ್ತೆ ದಾಸ ಸ್ವಾಮಿನ ಹೇಳಿ ವಿಗ್ರಹ ಹೊತ್ತ ಭಕ್ತನ ಕೈಯಲ್ಲಿ ವಿಗ್ರಹನ ಕೊಟ್ಟದೆ. ಆ ವಿಗ್ರಹನ ಹಿಡ್ಕಂಡ್  ಸ್ವಾಮಿನ ಕರ್‌ಕಂಡ್ (ಗೋವಿಂದ ಗೋವಿಂದ)ತ್ತೇಳಿ ಮೂರು ಸಲ ನೀರ್‌ಲಿ ಮುಳ್‌ಗಿ ಎದ್ದವೆ. ಮತ್ತೆ ವಿಗ್ರಹನ ತಕ್ಕೊಂಡೋಗಿ ದಾಸ ಚಪ್ಪರದಡಿಲಿ ಶಂಖ ಜಾಗಟೆಯಿಂದ ಪೂಜೆ ಮಾಡಿಕೆ ಸುರು ಮಾಡ್ದೆ. ಅಷ್ಟೊತ್ತಿಗೆ ಉಳಿದ ಭಕ್ತರ್  ಸ್ನಾನ ಮುಗಿಸಿ ಪಂಚೆ ಉಟ್ಟ್ ದರ್ಶನ ಭಕ್ತರ್ ಮತ್ತೆ ವಿಗ್ರಹ ಹೊತ್ತ ಭಕ್ತರ್ ಹಾರ್‌ಕಚ್ಚೆ ಹಾಕಿ ಬಂದ್ ಚಪ್ಪರದ ಮುಂದೆ ನಿಂತವೆ.

ಪೂಜೆ  ಮಾಡ್ದ ಚಪ್ಪರದಡಿಲಿ ಒಂದು ತುಳಿಸಿಗಿಡ ನೆಟ್ಟವೆ. ತುಳಸಿ ಅಂದರೆ ಲಕ್ಷ್ಮೀ ಅಲ್ಲಿ ಲಕ್ಷ್ಮೀಗೂ ಪೂಜೆ ಮಾಡುವೆ. ಮತ್ತೆ ಮಂಗಳಾರತಿ ಮಾಡಿಕಂಡ್ ಸ್ವಾಮಿನ ಕರ್‌ದವೆ. ಆಗ ದರ್ಶನ  ಭಕ್ತರಿಗೆ  ಆವೇಶ ಬಂದವೆ. ಮೈಮರೆತ್ ಕುಣ್ದವೆ. ದಾಸ ಸ್ವಾವೆಕೋಲು, ಅಂದರೆ ದರ್ಶನ ಭಕ್ತರ ವಜ್ರಾಯುಧ ಹಿಡಿದ್ ದರ್ಶನ  ಭಕ್ತರ್ ಅವರ ಮೈ ಮೇಲೆ ಬಾಸುಂಡೆ ಬರುವಂಗೆ ಹೊಡ್ಕಂಡವೆ. ವಿಗ್ರಹನ ಭಕ್ತನ ತಲೆ ಮ್ಯಾಲೆ ಹೊರಿಸಿವೆ. ಓಡ್ಡೋಲಗ ಸುರಾದೆ. ದರ್ಶನ ಭಕ್ತರ್ ಒಂದೆರೆಡ್ ಮುತ್ತಪ್ಪಣೆ ಕೊಟ್ಟ್ ಆಶೀರ್ವಾದ  ಕೊಟ್ಟ್ ಮುಂದೆ ಮನೆ ಕಡೆ  ಹೊರಟವೆ. ಇಲ್ಲಿಂದ ಮುಂದೆ  ಸ್ವಾಮಿನ ಕೊಂಡಾಡುದು. ಗಾವು ಬೀಳುದು, ಭಕ್ತರ್ ಗೋವಿಂದ ಗೋವಿಂದಾತ್ತೇಳಿ ಕುಣಿಯದ್ ನೋಡೊಕು. ಅದೆಷ್ಟ್ ಭಕ್ತಿ, ಅದೆಷ್ಟ್ ಖುಷಿ. ಚಪ್ಪರ ಹಾಕಿದ್ದಲ್ಲಿಂದ ಕುಣ್‌ಕಂಡ್

ಹೊರಟವೆ. ಒಬ್ಬ ದರ್ಶನ ಭಕ್ತನ ಕೈಯಲಿ ಕೆಂಬಿರಾಯ ಸ್ವಾಮಿಯ ಮುಖದ (ಹಲಗೆ) ವಿಗ್ರಹ, ಒಬ್ಬ ದರ್ಶನ ಭಕ್ತರ ಕೈಲಿ ಸ್ವಾವೆಕೋಲು, ಹೆಚ್ಚಿನ ದರ್ಶನ ಭಕ್ತರಿದ್ದರೆ ಅವರ ಕೈಲಿ ಬ್ಯಾಟೆಸೊಪು (ಕೊಂದೆಸೊಪ್ಪು), ಕೊಟ್ಟ್ ಅವು ಕುಣಿಯಕಾಕನ ಅವರ ಮುಂದೆ ಮುಂದೆ ಮಡಿವಾಳ (ಡೋಬಿ) ಮತ್ತೊಬ್ಬ ಭಕ್ತ ಅಥವಾ ಊರಿನವು ಒಬ್ಬ ಹಿಂಗೆ ಎರಡ್ ದೊಂದಿಗಳ್ನ ಬೀಸಿ ಹೊತ್ತಿಸಿಕಂಡ್ ಕುಣ್ದವೆ. ಹಿಂಗೆ ಕರಿಣ್ಕಂಡ್ ಹೋಕಾಕನ ಸ್ನಾನ ಮಾಡಿ ಪೂಜೆ ಮಾಡ್ದ ಜಾಗಂದ ಮನೆಯವರೆಗೆ ಐದ್ ಏಳ್, ಅಥವಾ ದೂರ ಇದ್ದರೆ ಒಂಭತ್ ಜಾಗಲಿ ಗಾವು ಬೀಳ್ತವೆ. ಗಾವು ಬೀಳ್ದುತ್ತೇಳ್ರೆ ಒಂದು ದೊಡ್ಡ ಚಾಪೆ ಮ್ಯಾಲೆ ದೊಡ್ಡ ಮಡಿ ಪಂಚೆನ ಹಾಸಿ ಅದ್‌ಕ್ಕೆ ಬಾಳೆಹಣ್ಣ್, ಬೆಲ್ಲ, ಹೊದರಿಯೊಟ್ಟಿಗೆ ಮಿಶ್ರ ಮಾಡಿ ಇಟ್ಟ ಪ್ರಸಾದನ ಪೂಜೆಗೆ ಹಾಸಿದ ಬಟ್ಟೆ ತುಂಬಾ ಅಲ್ಲಲ್ಲಿ ಚೆಲ್ಲುದು. ಕೆಂಚರಾಯನ ದರ್ಶನ ಭಕ್ತರ್ ಅದರ ಸುತ್ತ ಕುಣ್ಕಂಡ್ ಆ ಹೊದರಿ ಪ್ರಸಾದದ ಮೇಲೆ ಬಿದ್ದ್ ಅದನ್ನ ಬಾಯಿಂದ ಕಚ್ಚಿ ತಿಂದವೆ. ಒಡನೆ ಎದ್ದ್ ದೊಂದಿ ಹಿಡ್ದವರ ಹತ್ತಿರ ಓಡಿ ಹೋಗಿ ಆ ಬೆಂಕಿನ ಕಚ್ಚಿಕೆ ನೋಡಿವೆ. ಆ ಸಮಯಲಿ ದೊಂದಿ ಹಿಡಿದ ಭಕ್ತ ಬಹಳ ಹುಷಾರ್ ಮಾಡಿ ಬಿಟ್ಟವೆ. ಇಲ್ಲದಿದ್ದರೆ ದೊಂದಿನ ಕಚ್ಚಿಬಿಟ್ಟವೆ. ಹಂಗೆ ಗಾವು ಬಿದ್ದ್‌ಕಂಡ್ ಮನೆಯ ಹತ್ತಿರ ಹೋದವೆ. ಆಕೀರಿ ಗಾವು ಮನೆಯ ಅಂಗಳ ದ ಹತ್ತಿರ ಬಿದ್ದವೆ. ನಂತರ ಕೆಂಚ್‌ರಾಯ ದರ್ಶನ ಭಕ್ತ ಮುತ್ತಪ್ಪಣೆ ಕೊಟ್ಟ್ ಅಲ್ಲಿ ತೆರೆಮರೆ ಹಿಡ್ದ್ ಕಚ್ಚಿಕೆ ಕೋಳಿ ಕೇಳ್ದೆ. ಆಗ ಕುಟುಂಬದವು ಕೋಳಿ ಕೊಡ್‌ದುಲೆ. ಬದಲಾಗಿ ಕೆಂಚಿರಾಯನ ಪೂಜೆಲಿ ಕೊಟ್ಟವೆತ್ತೇಳಿ ಕೊಂಡ ಮೇಲೆ ಮೇಲ್ಕಟ್ಟ್ ಅಡಿಗೆ ಬಂದ್ ಹೊತ್ತಿದ್ದ ವಿಗ್ರಹನ ಇಳಿಸಿವೆ. ದರ್ಶನ ನಿಂತದೆ. ಇಲ್ಲಿಗೆ ಕೆಂಚಿರಾಯನ ಜಳಕದ ಉತ್ಸವ ಮಾತ್ರ ನಿಂತದೆ.

ಮುಂದೆ ದಾಸ ಸ್ವಾಮಿಗೆ ಪಾನಕ ಪೂಜೆ ಮಾಡ್ದೆ. ತೆರೆಮರೆ

ಹಿಡ್ದವೆ. ಶಂಖ ಜಾಗಟೆ ಹಿಡ್ದ್ ಮಂಗಳಾರತಿ ಮಾಡುವೆ. ದರ್ಶನ ಭಕ್ತರ ಮೈ ನಡ್‌ಗ್‌ತ್ತಿದ್ದವೆ. ಇದಾದ ನಂತರ ಮಹಾಪೂಜೆ ಸುರ್ ಮಾಡುವೆ. ಓಡ್ಡೋಲಗ ಆಗುತ್ತಿದ್ದದೆ. ದಾಸ ಎಲ್ಲಾ ಗುಂಡಗಳಿಗೆ ಮಂಗಳಾರತಿ ಮಾಡ್ದೆ. ಗೋವಿಂದ ಗೋವಿಂದತ್ತೇಳಿ ಎಲ್ಲರ ಬಾಯಲಿ ಹೇಳುತ್ತಿದ್ದವೆ. ದಾಸ ಶಂಖ ಜಾಗಟೆ ಹಿಡ್ದ್ ತಿರಿಮಂತ್ರ ಹೇಳಿ ಶಂಖ ಊದಿದೆ. ದರ್ಶನ ಭಕ್ತರ್ ಮೈ ತುಂಬಿ ಕುಣ್ದವೆ. ದರ್ಶನ ಭಕ್ತರಿಗೆ ಕೈಗೆ ದಾಸ ಅಕ್ಕಿ ಕೊಟ್ಟದೆ, ಅಕ್ಕಿ ತಕ್ಕೊಂಡವೆ, ದಾಸ ಶ್ಯಾವೆ ಕೋಲ್‌ನ ಎರಡ್ ಕೈಗಳನ್ನ ಕತ್ರಿ ಕೈ ಮಾಡಿ ಹಿಡ್ದದೆ. ದರ್ಶನ ಭಕ್ತ ಅಕ್ಕಿ ಹಾಕಿ ಸ್ಯಾವೆ ಕೋಲ್ ಹಿಡ್ಕಂಡದೆ. ಹಂಗೆನೆ ಇರ್‌ಮುಂಡೆ ಹಾಕಿ ಗುಂಡದ ಮುಂದೆ ಕುದ್ದ್ ಮೈ ಬಾಸುಂಡೆ ಬರುವಂಗೆ ಹೊಡ್ಕಂಡದೆ. ಮತ್ತೆ ಕುಟುಂಬದ ಪಟ್ಟೆದಾರನ ಕರ್ದ್ ಮುತ್ತಪ್ಪಣೆ ಕೊಟ್ಟ್ ಆಶೀರ್ವಾದ ಮಾಡ್ದೆ. ಹಂಗೆನೆ ಹರಿಕೆ, ಮತ್ತೆ ಭಕ್ತಿ ಗುಂಡ ಕಟ್ಟಿಸಿದವರ್ನ ಕರ್ದ್ ಮುತ್ತಪ್ಪಣೆ ಕೊಟ್ಟ್ ಆಶೀರ್ವಾದ ಮಾಡ್ದೆ. ಯಾರಾದರ್ ಕೇಳ್ಸುವಂತವು ಇದ್ದರೆ ಅವರ್ನ ಕರ್ದ್ ಅವುಕೆ ಅನುವಾದ ಕೊಟ್ಟ್ ಆಶೀರ್ವಾದ ಮಾಡ್ದೆ. ಮತ್ತೆ ದಾಸಂಗೆ ಡೋಬಿ (ಮಡಿವಾಳಂಗೆ) ದರ್ಶನ ಭಕ್ತರಿಗೆ ಫಲಹಾರ ತಯಾರು ಮಾಡ್‌ದವುಕೆ ಮತ್ತೆ ಓಲಗದವುಕೆ ಅನುವಾದ ಕೊಟ್ಟದೆ, ಆರ್ಶೀವಾದ ಕೊಟ್ಟದೆ ಮತ್ತೆ ಕೊನೆಗೆ ಕುಟುಂಬಸ್ತರಿಗೆ ಮತ್ತೆ ಬಂದಂತಹ ಸರ್ವ ಭಕ್ತಾದಿಗಳಿಗೆ ಆರ್ಶೀವಾದ ಕೊಟ್ಟ್ ಅಕ್ಕಿ ಕೊಟ್ಟ್ ದಾಸಂಗೆ ಆರ್ಶೀವಾದ ಕೊಟ್ಟ್ ಶ್ಯಾವೆ ಕೋಲ್‌ನ ಧಾಸಂಗೆ ಕೊಟ್ಟ್, ಗುಂಡದ ಮುಂದೆ ಅಡ್ಡಬಿದ್ದವೆ. ಇಲ್ಲಿಗೆ ಸ್ವಾಮಿ ಹರಿಸೇವೆಯ ಒಂದು ಭಾಗ ಮುಗ್‌ದದೆ.

ನಂತರ ದಾಸ ಮುಡುಪುನ ಎದ್‌ರ್‌ಗೆ ಎರಡು ಕೊಡಿ ಬಾಳೆಲೆ ಹಾಕಿ ಅದಕ್ಕೆ ಹೂವು ಒಳ್ಳೆ ಮೆಣಸ್ ಹಾಕಿ ಇಟ್ಟ್. ಭಕ್ತಾಧಿಗಳನ್ನ ತೀರ್ಥ ಪ್ರಸಾದ ತಕಣಿಕೆ ಕರ್‌ದವೆ. ಹಂಗೇನೇ

ಭಕ್ತಾಧಿಗ ಕಾಣಿಕೆ ಹಾಕಿ ತೀರ್ಥ ಪ್ರಸಾದ ತಕಂಡವೆ. ಇನ್ನೊಂದು ಬದಿಲಿ ಪಾನಕ ಕುಡಿಯಕೆ ಕೊಟ್ಟವೆ ಮತ್ತೆ ಅವರವರ ಹಣ್‌ಕಾಯಿಗಳ್ನ ಅವುಕೆ ಕೊಟ್ಟವೆ. ಇದ್ ಎಲ್ಲವುಕೆ ಕೊಟ್ ಆದ ಮ್ಯಾಲೆ ಮುಡ್‌ಪಿಗೆ ಬಂದ ಹಣ ಲೆಕ್ಕ ಮಾಡಿ ಒಟ್ಟು ಲೆಕ್ಕನ ಬರೆದಿಟ್ಟ್ ಅದನ್ನ ಮುಡ್‌ಪಿಗೆ ಹಾಕಿಕೆ ಮುಂದೆ ಕುಟುಂಬಸ್ತರ್‌ನ ದಾಸ ಕೇಳ್ದೆ. ಮುಡ್‌ಪಿಗೆ ಬಿದ್ದ ಹಣನ್ನ ಬ್ಯಾಂಕ್ ಮುಖಾಂತರ ತಿರುಪತಿಗೆ ಕಳುಹಿಸಿ ಕೊಟ್ಟರೆ ಅಥವಾ ಮುಂದಿನ ಹರಿಸೇವೆಗೆ ತಿರುಪತಿಗೆ ಹೋಗ್‌ವವು ಮುಡ್‌ಪುನ ಹೋಗಿ ಒಪ್ಪಿಸಿ ಬಂದರೆತಾ: ಕೇಳ್‌ದೆ ಇದ್ ಆಯಾಯಾ ಕುಟುಂಬಸ್ತರ ತೀರ್ಮಾನ ಆದರೂ ಸಹ ಹಿಂದೆ ನಡ್ದ್ ಬಂದಂತ ಪದ್ಧತಿಯಂತೆ ತಿರುಪತಿಗೆ ಒಪ್ಪಿಸಿ ಬಾದೆ ಸರಿತ್ತೇಳಿ ಕಾಣುತುಟ್ಟು. ಅದೆಂಗೆ ಇರಲಿ ಮುಡ್‌ಪಿಗೆ ಹಣ ಲೆಕ್ಕಮಾಡಿ ಹಾಕಿದವು ಕುಟುಂಬದ ಪಟ್ಟೆದಾರನ ಕೈಯಿಂದ ಮುಟ್ಟಿದ ಕೈಗೆ ಒಟ್ಟತ್ತೇಳಿ ತಪ್ಪಿನ ಕಾಣಿಕೆ ಹಾಕಿಸಿ ಬರೆದಂತ ಲೆಕ್ಕದ ಚೀಟಿನ ಅದರೊಳಗೆ ಹಾಕಿವೆ. ಕುಟುಭಸ್ತರ್ ಭಕ್ತಿ ಹಾಕ್‌ಕಾಕನ ಅವರವರ ಕುಟುಂಬಲಿ ನಡ್ದಂತಾ ಮುದವೇಲಿ ನೆಲ್ಲಕ್ಕಿ ಅಡಿಲಿ ಸ್ವಾಮಿಯ ಹೆಸರೇಳಿ ಅಥವಾ ಸಬ್ಬಮ್ಮ ದೇವರ ಹೆಸರೇಳಿ ಕಟ್ಟಿದ ಹರಿಕೆ ಹಣನ ಆ ಮುಡ್‌ಪುಗೆ ಹಾಕಿವೆ.

ಇದಾದ ಮ್ಯಾಲೆ ದಾಸ ಮುಡುಪು ಪೂಜೆ ಮಾಡ್ದೆ. ಮುಡ್‌ಪುನ ಎತ್ತಿ ಕುಟುಂಬದ ಪಟ್ಟೆದಾರನ ಅಥವಾ ಅವರ ಅನುಮತಿ ಪಡ್ದ ಇನ್ನೊಬ್ಬರ ತಲೆಗೆ ಹೊರಿಸಿವೆ. ಆಗ ಒಡ್ಡೋಲಗ ಆದೆ. ದಾಸನ ಶಂಖ ಜಾಗಟೆಲಿ ಮುಡ್‌ಪುನ ಅಟ್ಟಕ್ಕೆ ತಕೊಂಡೋಗಿ ಹಿಂದೆ ಮುಡ್‌ಪು ಇದ್ದ ಜಾಗಲಿ ಕಟ್ಟಿವೆ. ಒಂದು ವಿಚಾರ ತಿರುಪತಿಗೆ ಬ್ಯಾಂಕ್ ಮುಖಾಂತರ ಹಣ ಕಳುಹಿಸಿಕೊಟ್ಟರು ಸಹ ಪೂರ್ತಿ ಹಣನ ಕಳ್ಸುದುಲೇ. ಸ್ವಲ್ಪ ಮುಡ್‌ಪುಲಿ ಇಟ್ಟೇ ಇರಕು ಯಾವುದೇ ಕಾರಣಕ್ಕು ಖಾಲಿ ಮುಡ್‌ಪು ಕಟ್ಟ್‌ಕಾಗದ್ ಇಲ್ಲಿಗೆ ಸ್ವಾಮಿಯ ಹರಿಸೇವೆ ಮುಗ್‌ಸುವೆ ಮುಂದೆ ಕೆಂಚ್‌ರಾಯ

ಕರಿರಾಯಂಗೆ ಪೂಜೆ ಮಾಡ್ದು. ಚಪ್ಪರದಡಿಲಿ ಕಟ್ಟಿದ ಎಲ್ಲಾ ಗುಂಡಗಳಿಗೆ ದಾಸ ಬಾಳೆಲೆ ಮುಚ್ಚಿದೆ. ಕೆಂಚಿರಾಯಂಗೆ ಚಪ್ಪರದ ಒಂದು ಮೂಲೆಲಿ ಅಂದರೆ ಗುಂಡಕ್ಕೆ ಎದ್‌ರ್‌ಗಡೆ ಅಲ್ಲ ಸ್ವಲ್ಪ ಬದೀಲಿ ದೂರಲಿ ಒಂದು ಮಣೆ ಹಾಕಿ, ಮಣೆ ಮ್ಯಾಲೆ ಒಂದ್ ಸೇರ್‌ಲಿ ಭತ್ತ, ಮಾನಲಿ ಅಕ್ಕಿ ಇಟ್ಟ್ ಬದಿಲಿ ತವುಡ್ ಇಟ್ಟ್‌ಕಂಡ್ ಅಕ್ಕಿ ಹುಡಿಲಿ ಸಣ್ಣದಾಗಿ ಮಂಡಲ ಬರ್ದವೆ. ಒಂದು ಬದೀಲಿ ಬ್ಯಾಟೆಸೊಪ್ಪ್ ಇಟ್ಟಿದ್ದ್ ಒಂದ್ ಗ್ಲಾಸ್ ಕಳ್ಳ್ ಇಟ್ಟಿದ್ದವೆ. ಕೆಂಚಿರಾಯನ ದರ್ಶನ ಭಕ್ತರ್‌ನ ಮನೆಯೊಳಗೆ ಬಾಡೆಲಿ ನಿಲ್ಲಿಸಿ ಬಾಗಿಲ್ ಹಾಕುವೆ ಅಥವಾ ಐದಾರ್ ಗಟ್ಟಿ ಮುಟ್ಟಾದ ಹುಡ್‌ಗರ್ನ ಆ ದರ್ಶನ ಭಕ್ತರ್‌ನ್ನ ತಡ್ದ್ ನಿಲ್ಲಿಸಿಕಂಡ್ ಇದ್ದವೆ. ಅದೇ ಹೊತ್ತಿಗೆ ಆ ಜಾಗಲಿ ಕೆಂಚಿರಾಯಂಗೆ ಎಡೆ ಇಟ್ಟ ಜಾಗಲಿ ಕೋಳಿ ಕುಯ್ದವೆ. ಮತ್ತೆ ಆಡ್ ಸಹ ಕುಯ್ದವೆ ಅದರ ರಕ್ತ ತುಂಬಾ ಬಿದ್ದದೆತೇಳಿ ಬೋಗುಣಿಗೆ ರಕ್ತನ ಬೀಳುವಂಗೆ ಹಿಡ್ದವೆ. ಅಲ್ಲಿ ಅಲ್ಪಸ್ವಲ್ಪ ರಕ್ತ ಚೆಲ್ಲಿದಕ್ಕೆ ತೌಡ್ ಹಾಕಿ ಮುಚ್ಚಿವೆ. ಆ ಸಮಯಲಿ ಕೆಂಚಿರಾಯ ದರ್ಶನ ಭಕ್ತರಿಗೆ ಆವೇಶ (ಮೈತುಂಬಿ) ಬಂದಿದ್ದದೆ. ಅವರ್ನ ಬಾಗ್‌ಲ್‌ಂದ ಬಿಟ್ಟವೆ. ಅವು ಸೀದಾ ಆಡ್‌ಕೋಳಿ ಕೊಯ್ದ ಜಾಗಕ್ಕೆ ಬಂದ್ ಆ ತೌಡ್ ಮೇಲೆ ಬಿದ್ದ್ ರಕ್ತ ಕುಡಿಯಕ್ಕೆ ಹುಡ್‌ಕುವೆ ಕೈಗಳಲ್ಲಿ ತೌಡ್‌ನ ಕೆರ್‌ದ್ ರಕ್ತನ ಹುಡ್‌ಕುವೆ ದಾಸ ಅವರ ಕೈಗೆ ಬ್ಯಾಟೆ ಸೊಪ್ಪುನ ಕೊಟ್ಟವೆ. ಬ್ಯಾಟೆ ಸೊಪ್ಪು ಹಿಡ್ದ್ ಒಡ್ಡೋಲಗಲಿ ಕುಣ್‌ದ್ ಮುತ್ತಪ್ಪಣೆ ಕೊಟ್ಟದೆ. ಯಾರಾದರ್ ಕೇಳುಸುವವು ಇದ್ದರೆ ಕೇಳಸ್‌ವೆ ಇಲ್ಲದಿದ್ದರೆ ಭಕ್ತಾದಿಗಳಿಗೆ ಆರ್ಶೀವಾದ ಮಾಡಿ ಬ್ಯಾಟೆ ಸೊಪ್ಪುನ ಪ್ರಸಾದವಾಗಿ ಕೊಟ್ಟದೆ. ನಂತರ ಕುಟುಂಬಸ್ತರಿಗೆ ಬಂದಂತಹ ಸರ್ವ ಭಕ್ತಾದಿಗಳಿಗೆ ಆರ್ಶೀವಾದ ಮಾಡಿ ದಾಸನ ಶಂಖ ಜಾಗಟೇಲಿ ದರ್ಶನ ನಿಂತದೆ. ಇಲ್ಲಿಗೆ ಸ್ವಾಮಿಯ ಹರಿಸೇವೆ ಮತ್ತೆ ಕರಿರಾಯ, ಕೆಂಚಿರಾಯರ ಹರಿಸೇವೆ ಪೂರ್ತಿ ಮುಗ್‌ದದೆ.

ಮುಂದೆ ಕುಯ್ದಂತ ಆಡ್‌ಕೋಳಿನ ಊರವು ಸೇರಿಕಂಡ್

ಸರಿಮಾಡಿ (ಮಾಂಸಮಾಡಿ) ಅದನ್ನ ಅಡುಗೆ ಮಾಡಿ ಭಕ್ತರ್ ಸ್ವಾಮಿಗೆ ಎಡೆಗೆ ಬೇಕಾದಷ್ಟು ರೊಟ್ಟಿ ಮಾಡುವೆ. ಗುಂಡದ ಮುಂದ್‌ಗಡೆ ಭಕ್ತರ ಲೆಕ್ಕಕ್ಕೆ ಸರಿಮಾಡಿ ಮತ್ತೆ ಕಾರಣಕ್ಕೆ ಹಾಕುವೆ. ಒಂದು ಎಡೆ ಊರಿಗೆ ಕೊಡಿಕೆ, ಒಂದು ಎಡೆ ನೆಂಟರಿಗೆ ಕೊಡಿಕೆ, ಒಂದು ಎಡೆ ಪಟ್ಟೆದಾರರಿಗೆ ಕೊಡಿಕೆ ಒಂದು ಎಡೆತೇಳಿ ಒಟ್ಟು ದಾಸ ಲೆಕ್ಕ ಹಾಕಿದೆ. ಹಂಗೆನೆ ಎಡೆ ಇಟ್ಟವೆ. ಆಡ್ ಮತ್ತೆ ಕೋಳಿ ಕುಯ್ದದರಲ್ಲಿ ಸ್ವಲ್ಪ ಕರಿಯಡ ಸೊರೆ ಮಾಂಸ ತೆಗೆದು ಸುಟ್ಟ್ ಎಡೆಗೆ ಇಕ್ಕಿಕೆ ಬೇಕಾದಷ್ಟು ತುಂಡುಗಳ ಮಾಡಿ ಇಟ್ಟ್ ಕಂಡೆವೆ, ಸಾರ್ ಮಾತ್ರ ಅಡುಗೆಯವ ಮಾಡಿ, ಎಡೆಗೆ ಬ್ಯಾರೆ ತೆಗೆದಿಟ್ಟವೆ. ಅನ್ನ ಸಹ ಮಾಡುವೆ. ದಾಸ ಹೇಳ್ದಂಗೆ ಎಲ್ಲಾ ಎಡೆಗಳಿಗೆ ಮೂರು ಮೂರು ಸಲ ಇಕ್ಕಿದಂಗೆ ಕೈಲಿ ಮಾಡಿ ಎಡೆ ಇಕ್ಕುವೆ. ಈ ಎಡೆ ಇಕ್ಕುವವು ಕುಟುಂಬದ ಭಕ್ತ. ಅವು ಅವರ ಬಾಯಿಗೆ ಬಿಳಿಬಟ್ಟೆ ಅಥವಾ ಚಾಲೆಮುಂಡ್ ಕಟ್ಟಿಕಂಡ್ ಎಡೆ ಇಕ್ಕುವಂತ ಪದ್ಧತಿ. ಇದಾದ ಮ್ಯಾಲೆ ದಾಸ ಶಂಖ ಜಾಗಟೆ ಹಿಡ್ದದೆ (ಉರಗಿದೆ) ಎಲ್ಲವು ತಿರುಗಿ ನಿಂತವೆ. ಸ್ವಲ್ಪ ಹೊತ್‌ಕಳ್ದ್ ಮ್ಯಾಲೆ ತಿರಗಿ ನಮಸ್ಕಾರ ಮಾಡಿವೆ. ಇದರಲ್ಲಿ ಒಂದು ಎಡೆನ ಕಾರಣಕ್ಕೆ ಹಾಕುವವರ ಕೈಗೆ ಕೊಟ್ಟವೆ. ಅವು ಅವರ ಮನೆಲಿ ಗುರುಕಾರಣಕ್ಕೆ ಹಾಕುವ ಪದ್ಧತಿಯಂಗೆ ಕಾರಣಕ್ಕೆ ಹಾಕುವೆ, ಅಲ್ಲಿದ್ದ ಕುಟುಂಬಸ್ಥರ್, ಬಂದು ಬಳಗದವು, ಊರ್‌ನವು ಸೇರಿಕಂಡ್ ನಿಂತಿದ್ದವೆ ಕಾರಣಕ್ಕೆ ಹಾಕಿದವು ಕಾರಣಕ್ಕೆ ಹಾಕಿದ ಉದ್ದೇಶನ ಎಡೆಮುಂದೆ ಹೇಳಿಕಂಡ್ ಇಕ್ಕಿದಂತ ಎಡೆನ ಗುರುಕಾರಣವು ತೃಪ್ತಿಯಿಂದ ಸ್ವೀಕರಿಸಕುತ್ತೇಳಿ ಬೇಡಿಕಂಡ್ ಎಲ್ಲಾವು ಎಡೆಗೆ ಅಕ್ಕಿ ಹಾಕಿ ತಿರ್‌ಗಿ ನಿಂತವೆ. ಸ್ವಲ್ಪ ನಿಂತ್ ಸದ್‌ಮಾಡಿಕಂಡ್ ಹಿಂದಕ್ಕೆ ತಿರ್‌ಗಿ ಎಡೆಗೆ ನಮಸ್ಕಾರ ಮಾಡಿವೆ. ಹಿರಿಯವರ ಕಾಲನ ಕಿರಿಯವ ಹಿಡ್ದ್ ಆಶೀರ್ವಾದ ಬೇಡುವೆ.

ಇದಾದ ಮ್ಯಾಲೆ ಗುಂಡದ ಮುಂದೆ ಊಟ ಕೊಟ್ಟವೆ.



5

ಊರ್‌ವುಕ್ಕೆ ಬಂದ್‌ಬಳಗದವುಕ್ಕೆಲ್ಲಾ ಮಾಂಸದ ಗದ್ದಳದ ಊಟ ಕೊಟ್ಟವೆ. ದಾಸ ಒಂದೆರಡ್ ಮಾತ್‌ಗಳ ಹೇಳಿಕಂಡ ಶಂಖ ಜಾಗಟೆ ಹಿಡ್ದದೆ (ಊದಿವೆ) ಎಲ್ಲವು ಊಟೋಪಚಾರ ಸಂತೋಷಲಿ ಮಾಡ್‌ವೆ. ಊಟ ಆದ ಮ್ಯಾಲೆ ವಾದ್ಯದ ಕುಣತ ಸುರ್‌ಮಾಡ್ವೆ.

ಕಡೆಯದಾಗಿ ಕಟ್ಟಿದಂತ ಗುಂಡನ ತಕೊಂಡೋಗಿ ಫಲದ ಮರದ ಕೆಳಗೆ ಇಡುವ ಪದ್ಧತಿ. ದಾಸ ಊಟ ಆದ ಮ್ಯಾಲೆ ಗುಂಡಲಿದ್ದ ಅಕ್ಕಿ, ತೆಂಗಿನಕಾಯಿ, ಕಳಸದ ಚೊಂಬು, ಫೋಟೋ, ಶ್ಯಾವೆಕೋಲು, ಎಲೆ ತಟ್ಟೆ (ಹರಿವಾಣ) ಎಲೆ ಅಡಿಕೆ, ಬಾಳೆಹಣ್ ಎಲ್ಲ ತೆಗ್‌ದವೆ. ಭಕ್ತರ್‌ನ ಕುಟುಂಬಸ್ಥರನ ಊರ್‌ನವರ ಕರ್‌ದದೆ, ಗುಂಡದ ಒಳಗಡೆಯಿಂದ ಆ ಗುಂಡನ ಎತ್ತಿ ಹೊತ್ತ್‌ಕಂಡ್ ಹೋಕೆ ಆಗುವಂತ ಮರದ ಗಳ ಅಥವಾ ಬಿದ್‌ರ್‌ನ ಗಳ ಹಾಕಿ ಎತ್ತಿಕೆ ಹೇಳ್ವೆ, ದೀಪ ಮಾತ್ರ ಹೊತ್ತಿಕಂಡ್ ಇದ್ದದೆ. ಹಂಗೆನೆ ದಳಿ ಕಟ್ಟಿದ್ದರೆ ಅದನ್ನ ಸಹ ಬಿಚ್ಚಿವೆ. ಈ ಎತ್ತಿದಂತಾ: ಗುಂಡನ ಕೊಣ್‌ಸಿಕಂಡ್ ಕೊಣ್‌ಸಿಕಂಡ್ ಗೋವಿಂದಾ, ಗೋವಿಂದಾತ್ತೇಳಿಕಂಡ್ ದಾಸ ಶಂಖ ಜಾಗಟೆ ಊದಿಕಂಡ್ ಒಡ್ಡೋಲಗಲಿ ತಕೊಂಡೋಗಿ ಹಾಲ್ ಬರುವ ಮರದ ಬುಡಲೀ ಮಡ್ಗುವೆ. ಭಕ್ತರಿಗೆ ಹಾಕಿದ ಹೂ ಮಾಲೆಗಳ್ನ ಅವು ಬಿಚ್ಚಿ ಗುಂಡದ ಮ್ಯಾಲೆ ಹಾಕಿ ನಮಸ್ಕಾರ ಮಾಡುವೆ ಇಲ್ಲಿಗೆ ನಮ್ಮ ಗೌಡಗಳ ಹರಿಸೇವೆ ಪದ್ದತಿ ಮುಗ್‌ದದೆ. ಇದ್‌ಕೆ ಸಂಬಂದಪಟ್ಟಂಗೆ ಸೋಭಾನೆ ಉಟ್ಟು ಹಾಡ್‌ಗೊಳೊ ಅದನ್ನೆಲ್ಲಾ ಕಡೇಗೆ ಕೇಳೊನೋ ಇದ್ ಅಂದ್ ಇಂದ್ ಇನ್ ಮುಂದೆ ಸಹ ಒಂದೇ ತರ ನಡ್ದದೆ ನಡೆಯಕು ಅಕಾಡೆಮಿಯ ಸಹಾಯಬೇಕು.

* * * * *

# ಕಾರ್ತಿಂಗಲಿ ದೆವ್ವ ದೇವರಿಗೆ ಕೊಡ್ದು

ದೆವ್ವತ್ತೇಳಿರೆ ಎಂತದ್‌ತೇಳ್ದು ಸಾಮಾನ್ಯ ಮನ್ಸರ್ ಆಡಿ ಕೊಂಬಂತ ಒಂದು ಮಾತು. ಇನ್ ಕೆಲವರ್‌ಲಿ ಅಂದ್ ದೆವ್ವಗ ಇದ್ದು ಅವು ಹೇಳ್ದಂಗೆ ನಡ್ಕೋಂಬತ್ತಿದೋ ಅದಕ್ಕಾಗಿ ಕಾಲಕಾಲಕ್ಕೆ ಸರಿಯಾಗಿ ಕಾರ್ತಿಂಗಳಲ್ಲಿ ದೆವ್ವಗಳಿಗೆ ಕೊಡ್ದುತ್ತೇಲಿ ಒಂದು ನಡಪು ಅಥವಾ ಪದ್ಧತಿ ಮಾಡಿಕೊಂಡ್ ಬಂದೊಳೊ. ಅದರ್‌ಂದ ಐನ್‌ಮನೆಲ ಇದ್ದವು ಸೇರಿಕೊಂಡು ದೆವ್ವಗಳಿಗೆ ಕೊಡಲಿ ದೂರ ದೂರದಲ್ಲಿ ಇದ್ದವು ನಮಗೆ ಅದಕೆಲ್ಲಾ ಬಾಕೆ ಆದುಲೆ. ಈ ವಿಜ್ಞಾನದ ಯುಗಲೀ (ಕಾಲಲಿ) ಇದೆಲ್ಲಾ ಒಂದು ಮೂಡನಂಬಿಕೆತ್ತೇಳಿ ಸುಮ್ಮನಾದವೆ.

ನಾನ್ ತಿಳಿದ ಮಟ್ಟಿಗೆ ಹೇಳ್ದು ಏನ್‌ತ್ತೇಳಿರೆ ಈ ಮನುಷ್ಯ ಜನ್ಮ ಹುಟ್ಟಿ ಬಾಕಾಕನ ಅವನನ ಜೀವನದ ಬಗ್ಗೆ ಅಂವ ಏನಾದೆ ಎಂತದಾದೆತ್ತೇಳ್ದುನ್ನ ಬ್ರಹ್ಮ ದೇವರು ಬರೆದಿದ್ದುತಾ ಹೇಳುವೆ. ಹಂಗೆನೆ ಪ್ರತಿಯೊಬ್ಬ ಮನುಷ್ಯ ಜೀವಿಯ ಆಯಸ್ಸು 120 (ಒಂದು ನೂರ ಇಪ್ಪತ್ತು ವರ್ಷತ್ತೇಳಿವೆ) ನಾವು ನೀವು ಎಲ್ಲವೂ ತಿಳಿದ ಮಟ್ಟಿಗೆ ಯಾರು ನೂರ ಇಪ್ಪತ್ತು ವರ್ಷ ಬದುಕುದುಲೆ, ಒಂದು

ವೇಳೆ ಬದುಕಿದ್ದರೂ ಅವನ ಅಥವಾ ಅವಳ ಜೀವನ ಅತೀನರಕ ಅದರ್‌ಲಿ ಮನುಷ್ಯ ಜೀವನದ ಮಧ್ಯೆ ಕೆಲವು ಕಂಟಕಗಳನ್ನ ಬರ್‌ದಿದ್ದದೆ. ಆ ಕಂಟಕಗಳ್ನ ಹೋಗಲಾಡಿಸಿಕ್ಕಾಗಿ ಹೋಮ ಪೂಜೆ ಪುರಸ್ಕಾರಗಳನ್ನು ಅದಕ್ಕೆ ಸಂಬಂಧಪಟ್ಟ ದೇವರಿಗೆ ಮಾಡಿಸಿ ಶಾಂತಿ ಮಾಡಿಸಿಕೊಂಬುದು ಸಹ ಒಂದು ರೂಡಿಯಾದ ನಡ್‌ಪು. ಇದ್ ಅಂದ್‌ಂದ ಬಂದಂತದ್. ಋಷಿ ಮುನಿಗ ತಿಳಿಸಿಕೊಟ್ಟದ್ದ್ ಆದರೆ ಈಗೀನ ಈ ವಿಜ್ಞಾನ ಯುಗಲಿ ಅದಕ್ಕೆಲ್ಲಾ ತುಂಬಾ ಕಾರಣಗಳ್ನ ಆದಾರಗಳ್ನ ಕೊಟ್ಟ್ ಕೈ ಬುಡ್ತೋಳೊ. ಆದರೆ ನಾವು ಮಾತ್ರ ತಿಳ್ಕಣಕಾದ ಒಂದೇ ಒಂದು ಮುಖ್ಯವಾದ ಅಂಶ ದೈವ ಶಕ್ತಿ ಮತ್ತೆ ವಿಜ್ಞಾನದ ಶಕ್ತಿತ್ತೇಳಿ ಎರಡು ಭಾಗಗ. ದೈವಶಕ್ತಿತ್ತೇಳಿರೆ ಯಾವುದೇ ಮಾದ್ಯಮಗಳಿಲ್ಲದೆ ಅದೊಂದು ಮೂಲಂದ ಒಂದು ವ್ಯಕ್ತಿಗೆ ಅಥವಾ ಇಡೀ ಪ್ರಕೃತಿಗೆ ಸಂದೇಶಗಳ್ನ ಕೊಡ್‌ತಿದ್ದದೆ. ಅದನ್ನೇ ನಂಬಿ ಪಾಲಿಸಿಕಂಡ್ ಬಂದವರ್ನ ಅವರ ತಾತ್ಕಾಲಿಕ ತಾಪತ್ರೆಗಳ್ನ ಸಕಾಲಲಿ ನಿವಾರಣೆ ಮಾಡಿಕೊಟ್ಟದೆ. ಅಂದರೆ ಇದ್ ವಿಜ್ಞಾನಿಗಳಿಂದ ಸರ್ವತಃ ಸಾಧ್ಯ ಇಲ್ಲೆ. ನಾವು ಹೇಳಕ್ಕ್ ವಿಜ್ಞಾನ ಎಷ್ಟ್ ಮುಂದ್‌ವರಿದುಟ್ಟ್‌ಗೊತ್ತಾ ಈ ಭೂಮಿಂದ ಗ್ರಹಗಳಿಗೆ ಹೋಗಿ ತಲ್‌ಪಿ ಒಳೋ. ಮಂಗಳ ಗ್ರಹಕ್ಕೆ ತಲ್‌ಪಿಳೋ. ಕುದ್ದಲ್ಲಿಂದಲೇ ದೇಶ ದೇಶಗಳ ಮೂಲೆ ಮೂಲೆಗಳೊಂದಿಗೆ ವ್ಯವಹಾರ ಮಾಡಕ್. ವೈದ್ಯರ್ ಈ ಜೀವಿಗಳ ಆರೋಗ್ಯ ಕಾಪಾಡ್ತೊಳೊ. ಆಕಾಶಲಿ ಹಕ್ಕಿನಂಗೆ ಹಾರಾಡ್ತೊಳೊ. ನೀರಿಲಿ ಮೀನ್‌ಗಳಂಗೆ ತೇಲಾಡ್ತೊಳೊ. ಈ ಭೂಮಿಲಿ ಇಷ್ಟ ಬಂದಂಗೆ ಕಟ್ಟಡಗಳ್ನ ಕಟ್ಟಿ ಭೂಮಿನ ಉತ್ತ್ (ಹೂಡಿ) ಬಿತ್ತಿ, ಬೆಳೆ ಬೆಳ್‌ದ್ ಜೀವನ ಸಾಗಿಸಿಕ್ಕೆ ಬೇಕಾದಷ್ಟ್ ಆಹಾರಗಳ್ನ ಬೆಳೆಸ್ತೊಳೊ. ತುಂಬಾ ಹಾಲ್ ಕೊಡುವ ಹಸ್‌ಗಳ್ನ ಸಾಕಿ ಹಾಲ್ ಕುಡ್ದ್ ಜೀವನ ಮಾಡ್ತೊಳೊ. ಇದೆಲ್ಲಾ ಈ ವಿಜ್ಞಾನ ಯುಗಲಿ ನಾವು ಮಾಡ್‌ತ್ತಿರುದ್ದ್. ನಿಮ್ಮ ದೇವರು ಮಾಡಿಕೊಟ್ಟುಟಾಂತ್ತೇಳಿ ಕೇಳವು

ಬಹಳಷ್ಟು ಒಳೊ. ಇಂತಹ ಮನುಷ್ಯರ್ ಅವರವರ ತಿಳುವಳಿಕೆ ಗನುಸಾರವಾಗಿ ಹೇಳ್ದು ಸರಿತ್ತೇಳಕ್. ಆದರೆ ನಾನು ಅಥವಾ ನಾವುತೇಳಿ ಹೇಳುವಂತ ವ್ಯಕ್ತಿ ಬಂದ ಮೂಲ ಎಲ್ಲಿಂದತೇಳಿ ತಿಳಿವಷ್ಟ್ ಶಕ್ತಿ ಅವರ್‌ಲಿ ಇಲ್ಲದ್ದರಿಂದ ಬಹುಶಃ ಹೇಳ್ಬೊಳೆತ್ತೇಳಿ ಗ್ಯಾನ ಮಾಡೊಕ್. ಇನ್ನೊಂದ್ ಸಣ್ಣ ಉದಾಹರಣೆ ಒಂದು ಕಾಡ್ಲಿ ಅಥವಾ ಬೆಟ್ಟಲ್ಲಿ ಮರ ಗಿಡಗ ಬೆಳ್ದ್ ನಿಂತವೆ. ದೊಡ್ಡ ದೊಡ್ಡ ಪ್ರಾಣಿ ಕಲ್ಲ್‌ಗ ಇದ್ದವೆ. ಆ ಬೆಟ್ಟದ ಕೊಡಿಂದ ಪಾರೆಕಲ್ಲ್‌ಗಳ ಅಡಿಂದ, ಮರಕಾಡ್‌ಗಳ ಬೇರ್‌ಗಳ ಮದ್ಯಕ್ಕಾಗಿ ನೀರ್ ಹರ್ದ್ ಬಂದದೆ. ಅಂದರೆ ಈ ಪಾರೆಕಲ್ಲ್, ಗಿಡಮರಗ ಬೆಳೆಯೊಕ್ಕುತ್ತಾದರೆ ನೀರ್ ಮುಖ್ಯತೇಳ್ದು ಎಲ್ಲವುಕು ಗೊತ್ತುಟ್ಟು. ಇದೇ ಪ್ರಕೃತಿ ನೀರ್‌ನ ಈ ವಿಜ್ಞಾನಿಗ ಮಾಡಿಕೆ ಸಾಧ್ಯವುಟ್ಟಾ ಈಗ ನೀರ್‌ನ ವಿಭಜನೆ ಮಾಡಿ ವಿಜ್ಞಾನದ ಪ್ರಕಾರ ಊ2ಔ ತ್ತೇಳಿ ಹೇಳುವೆ. ಅಂದರೆ ಈ ಊ2ಔ ನ ಸೇರಿಸಿ ಈ ಪ್ರಪಂಚಕ್ಕೆ ಎಲ್ಲಾ ಜೀವಿಗಳಿಗೆ ಬೇಕಾದ ನೀರ್‌ನ ಈ ವಿಜ್ಞಾನಯುಗ ಮಾಡಿಕೆ ಸಾಧ್ಯಾವುಟ್ಟ? ಕಂಡಿತಾ ಸಾಧ್ಯ ಇಲ್ಲೆ. ಇನ್ನೊಂದು ವಿಚಾರ ತಕೊಂಡರೆ ಕಣ್ಣಿಗೆ ಕಾಣದ ಗಾಳಿ. ಈ ಗಾಳಿ ಇಲ್ಲದಿದ್ದರೆ ಈ ಪ್ರಪಂಚದ ಎಲ್ಲಾ ಜೀವಿಗ ಒಂದು ಸೆಂಕೆಂಡ್ ಸಹ ಬದುಕುಳಿಯುದುಲ್ಲೆ ಇದ್ ಎಲ್ಲವೂಕೂ ಗೊತ್ತಿರುವ ವಿಷಯ

ವಿಜ್ಞಾನ ಯುಗಲಿ ಹೇಳಕ್ ನಾನ್ ಪ್ಯಾನ್ ಹಾಕಿ ಅಥವಾ ಬೀಸಣಿಕೆ ಬೀಸಿ ಗಾಳಿ ಮಾಡಿಕಣಿತ್ತೇಳಿ. ಇದ್ ಎಷ್ಟರ ಮಟ್ಟಿಗೆ ಸಾಧ್ಯತ್ತೇಳಿ ನೀವೇ ಹೇಳಿ. ಇನ್ನೊಂದು ವಿಚಾರಕ್ಕೆ ಬರೋನೋ ಗುಡುಗು ಸಿಡಿಲ್ ಸುರಾದೆ ಮಳೆ ಮೋಡ ಕಪ್ಪಾದೆ, ಬೆಳಕ್ಕೆಲ್ಲಾ ಹೋಗಿ ಕತ್ತಕತ್ತಲೆ ಆದಂಗಾದೆ, ಈಗ ಮಳೆ ಬಂದದೆ, ಮಳೆ ಬಿದ್ದದೆ, ಮಳೆ ಹೊಡ್ಡದೆತ್ತೇಳುವ ಬುದ್ದಿ ಜೀವಿಗಳಾದ ನಾವು. ಆದರೆ ಗದ್ದೆಲಿ ಅಥವಾ ಬಾಣೆಲಿ ಮೇಯುತ್ತಿರುವ ದನಗ ಹಟ್ಟಿಗೆ (ಕೊಟ್ಟಿಗೆಗೆ) ಬಾದುಲೆ, ಹಕ್ಕಿ ಪಕ್ಷಿಗ ಹಾರಾಡ್‌ತಾ ಮೇವು

ಹುಡುತ್ತಿದ್ದವೆ. ಅವು ಅವರ ಗೂಡುಗಳಿಗೆ ಹೋದುಲೆ, ಜೇನ್ ನೊಣ, ಕಡಂದ್, ಬೆಇಂಣ್ಣ ಹೂವಿಂದ ಹೂವಿಗೆ ಹಾರಿ ಮಕರಂದ ಹೀರಿ ಗೂಡಿಗೆ ಸಾಗಿಸುತ್ತಿದ್ದವೆ. ಪಿಜಿನ್‌ಗಳ ಸಾಲಾಗಿ ಅಹಾರಕ್ಕಾಗಿ ಓಡಾಡುತ್ತಿದ್ದವೆ. ಸ್ವಲ್ಪ ಹೊತ್ತಿಗೆ ಒಂದು ಗಾಳಿ ಬಂದದೆ ಆ ಕಪ್ಪು ಮೋಡನ ಎಲ್ಲಿಗೋ ಕರ್‌ಕಂಡ್ ಹೋದದೆ. ಮಳೆ ಬಾದುಲೆ ಇದ್ ಈ ವಿಜ್ಞಾನಿ ಯುಗದ ಮನುಷ್ಯನಿಗಿಂತ ಮುಂದೆ ಪ್ರಾಣಿ, ಪಕ್ಷಿ ಜಂತುಗಳಿಗೆ ತಿಳಿದಿದ್ದದೆ. ಅದ್‌ರಂದ ನಾವು ಈ ವಿಜ್ಞಾನ ಯುಗಲಿ ಎಷ್ಟು ಮುಂದುವರಿದರು ಸಹ ದೇವರ ಶಕ್ತಿಯಿಂದ ಪಡ್‌ಕಂಡಂತ ವಿಜ್ಞಾನ ಶಕ್ತಿ ಮುಂದೆ ಬಹಳಷ್ಟ್. ಅಂದರೆ ತೀರಾ ಕಮ್ಮಿ ಈಗ ಇನ್ನೊಂದು ವಿಷಯಕ್ಕೆ ಪೋಯಿ. ನಾವು ವಿಜ್ಞಾನದ ಯುಗಲಿ ಇಷ್ಟೊಂದು ಮುಂದುವರೆಯಕ್ಕೆ ಮೂಲ ಯಾವುದುತ್ತೇಳಿ ತಿಳುಕೊಂಡರೆ ನಾವೇ ದೇವರು ದೇವರೆಲ್ಲಿ ಮಾಡಿಕೊಟ್ಟದೆ. ಮೊದಲು ಕರ್ತವ್ಯ ಮಾಡು ಮತ್ತೆ ನಿನ್ನ ದೆವ್ವ ದೇವರು ತ್ತೇಳುವವು ಸ್ವಲ್ಪ ಗಮನ ಹರಿಸೋಣ ನನ್ನ ಅಭಿಪ್ರಾಯದ ಪ್ರಕಾರ ಯಾವುದೇ ಒಂದು ಸಾಧನೆ ಮಾಡೋಕುತ್ತಾದರೆ ಅದಕ್ಕೆ ಮೂಲ ಆಧಾರ ಬೇಕೇ ಬೇಕು. ಈ ಮೂಲ ಆಧಾರವೇ ದೇವರ ಮೂಲ ಸೃಷ್ಟಿ. ಮೂಲ ಸೃಷ್ಟಿ ಇಲ್ಲದೆ ಹೋದರೆ ಯಾವ ವಿಜ್ಞಾನ ಮುಂದುವರಿಯಕಾದುಲೆ. ಈ ಮೂಲ ಸೃಷ್ಟಿಯೇ ದೇವರು. ಅಂದರೆ ಎಲ್ಲದಕ್ಕೂ ಆ ದೇವರೆ ಮೂಲ. ಈ ದೇವರು ಪ್ರತಿಯೊಂದು ಜೀವಿಗಳ ಜೀವನದ ಮೂಲನ ತನ್ನ ಶಕ್ತಿಗಳ ಮುಖಾಂತರ ಹಿಡ್‌ತಲಿ ಹಿಡ್‌ಕೊಂಡ್‌ಟ್ಟು. ಅಂದರೆ ಬ್ರಹ್ಮ ಕೊಟ್ಟಂತಹ ಮೂಲ ಆಯುಷ್ಯ ಮುಗಿಯದೆ ಅಂದರೆ ಸತ್ತರೆ ಅಂವ ಅಥವಾ ಅವಳು ಬದುಕಿಕೆ ಇದ್ದ ಅವದಿಯ ವಯಸ್ಸ್ ಕಳೆದ್ ಉಳಿದ ವಯಸ್ಸುಗಳಲ್ಲಿ ಆಯುಷ್ಯ 120 ತಲುಪುವವರೆಗೆ ಆ ಆತ್ಮ ದೆವ್ವವಾಗಿ ಉಳಿದದೆತ್ತೇಳುವೆ. ಈ ದೆವ್ವಗ ಸ್ವಾಮಿ ಇವರ ಪಾಲನೆಗಾಗಿ ಸೃಷ್ಟಿಸಿದ ಶಕ್ತಿಗಳ ಹತೋಟಿಯೊಳಗಿದ್ದವೆತ್ತೇಳುವೆ.

ಈ ದೆವ್ವಗಳಿಗೆ ಸಹ ಮನುಷ್ಯರಂಗೆ ಹಸಿವು ಇದ್ದದೆ. ಇವು ಗಾಳಿಯ ಮುಖಾಂತರ ಸುವಾಸನೆ ಹೀರಿಕೊಂಡ್ ಹಸಿವನ್ನು ಇಂಗಿಸಿ ಕಂಡಂವೆ. ಅಂದರೆ ಹಸಿವುನ ಕಳಕಂಡಂವೆ. ಈ ದೆವ್ವಗಳ ಲಾಲನೆ ಪಾಲನೆಯಲ್ಲಿರುವ ಶಕ್ತಿಗಳಿಗೂ ಸಹ ಹಸಿವು ಇದ್ದದೆ. ಅವುಕೆ ಸಹ ಹಸಿವು ಇಂಗಿಸಿಕಣಿಕೆ ಆಹಾರ ಬೇಕು. ಇವು ಸಮೇತ ಗಾಳಿಯ ಮೂಲಕ ಸುವಾಸನೆ ಹೀರಿ ಹಸಿವು ಇಂಗಿಸಿಕೊಂಡವೆ. ಅದಕ್ಕಾಗಿ ಬದುಕಿದ್ದ ನಾವು ಅವು ಜೀವನದಲ್ಲಿ ಸೇವಿಸ್‌ತ್ತಿದ್ದ ಆಹಾರ ಪದಾರ್ಥಗಳ್ನ ಮಾಡಿ ಅವರ ಹೆಸರೇಳಿ ವರ್ಷಕ್ಕೊಂದು ಸಾರಿ ಕಾರ್ತಿಂಗಳ ದೆವ್ವಗಳಿಗೆ ಕೊಡ್‌ದು. ಹಂಗೆನೇ ಕಾರಣಕ್ಕೆ ಹಾಕುವುದ್‌ತ್ತೇಳಿ ನಿಯಮ, ಪದ್ದತಿ ಅಥವಾ ನಡ್‌ಪು ಮಾಡಿಕಂಡ್ ಅವುಕ್ ಎಡೆ ಹಾಕಿ ಕೊಡ್ದು, ಕುಟುಂಬಸ್ಥರು ಸೇರಿ ಊಟ ಮಾಡುವ ಪದ್ದತಿನ ಕಾರ್ತಿಂಗಳ ದೆವ್ವಗಳಿಗೆ ಕೊಡ್ಡ್‌ತ್ತೇಳಿ ಕರ್‌ದವೆ. ಇದ್ ಕಾರ್ತಿಂಗಳಲಿ ಯಾಕೆತ್ತೇಳುವ ಒಂದ್ ಪ್ರಶ್ನೆ? ಇದ್ ಕಾರ್ತಿಂಗಳೆಲೇ ಆಕುತ್ತೇಳುವಂತ ನಿರ್ಭಂಧನ ಇಲ್ಲೆ.

ಒಂದು ವರ್ಷಲಿ ಒಂದು ದಿನ ಮಾಡಿಕಣಕ್ ಆದರೆ ಅಂದ್‌ನ ಕಾಲಲಿ ಶ್ರಮ ಜೀವಿಗ ಹೊಟ್ಟೆ ಪಾಡಿಗಾಗಿ ದಿನ ಕೆಲಸ ಮಾಡಕ್ಕಾಗಿತ್. ರೈತರಾದ ನಮ್ಮೆಲ್ಲರ ಒಂದು ವರ್ಷದ ಲೆಕ್ಕತ್ತೇಳಿರೆ ಮಳೆಗಾಲ ಸುರಾದಲ್ಲಿಂದ ಮುಂದಿನ ಮಳೆಗಾಲ ಸುರುವಾಗು ವವರೆಗೆ ಆದರೆ ಈ ಕಾರ್ತಿಂಗ ಸುರು ಆಕೆ ಮೊದಲಾಗಿ ಎಲ್ಲಾ ಕೆಲಸ ಕಾರ್ಯಗಳ್ನ ಅಂದರೆ ಗದ್ದೆ ಏಕಲ್ ಹೂಡಿ ಬೀಜ ಹಾಕಿ ಆಗಿದ್ದದೆ. ವರ್ಷದ ಖರ್ಚಿಗೆ ಇರುವ ಭತ್ತ ಕುಟ್ಟಿ ಅಕ್ಕಿ ಮಾಡಿ ಆಗಿದ್ದದೆ. ಮತ್ತೆ ವರ್ಷದ ಖರ್ಚಿಗಿರುವ ಸೌದೆ ಕಡ್ಡ್ ಆಗಿದ್ದದೆ. ಹಂಗೆನೆ ಗದ್ದೆಗೆ ಪೂರ್ತಿ ಗೊಬ್ಬರ ಸಹ (ಅಂದರೆ ಹಟ್ಟಿಗೊಬ್ಬರ) ಹಾಕಿ ಆಗಿದ್ದದೆ. ಮದುವೆ ಹಬ್ಬಗ ಮುಗಿದಿದ್ದದೆ. ಹಂಗಾಗಿ ಕಾರ್ತಿಂಗಳ ಕಡೆವಾರ (ಕೊನೆಯ ವಾರ) ಸ್ವಲ್ಪ ಅರಾಮವಾಗಿ ಇರ್‌ತಿದ್ದೊ. ಅಂದರೆ ಗದ್ದೆ ಹೂಡುವ ಕೆಲಸ, ಪುಣಿ ಕಡಿಯುವ

ಕೆಲಸ, ಏರಿಗೆ ಮಣ್ಣ್ ಮಡಗುವ ಕೆಲಸ ಗಂಡ್ ಜನರಿಗೆ ಇದ್ದೇ ಇತ್. ಆದರೆ ಸೋಮವಾರ ದನ ಹುಟ್ಟಿದ ದಿನತ್ತೇಳಿ ಸಾಮಾನ್ಯವಾಗಿ ಯಾರ್ ಸಹ ಗದ್ದೆ ಹೂಡ್‌ದುಲ್ಲೆ. ಅದಕ್ಕಾಗಿ ಆದಿತ್ಯವಾರ (ಭಾನುವಾರ) ಅದ್ ಮಧ್ಯಾಹ್ನದ ಮೇಲೆ ಮುಸ್ಸಂಜೆ ಹೊತ್ತಿಗೆ ಈ ದೆವ್ವಗಳಿಗೆ ಕೊಡುವ ಪದ್ದತಿನ ಮಾಡಿಕಂಡ್ ಬಂದೋಳೊ. ಹಂಗೆನೆ ಸಾಯಂಕಾಲನೇ ಕೊಡೊಕು ಹಗ್‌ಲ್ ಕೊಡ್‌ಕ್ಕಾಗದ್‌ತ್ತೇಳ್‌ದಕ್ಕೆ ಒಂದ್ ಕಾರಣ ಉಟ್ಟ್. 1. ಸಾಯಂಕಾಲ ಆಕಾಕನ ದನ ಕೂಡ್ಸಿ ಅಂದರೆ ಹಟ್ಟಿಲಿ (ಕೊಟ್ಟಿಗೇಲಿ) ಕಟ್ಟಿ ಹುಲ್ಲು ಹಾಕಿ ಆಗಿದ್ದದೆ. 2. ನಮ್ಮ ಪೂರ್ವಜರ ಹೇಳಿಕೆ ಅಥವಾ ನಂಬಿಕೆ ಪ್ರಕಾರ ಮನೆಲಿರುವ ದೆವ್ವಗ ಮತ್ತೆ ಗುರುಕಾರಣವು ಅವರವರ ಐನ್‌ಮನೆಲಿ ಇರದುಲೆ. ಅವರ್ದೆ ಆದ ಚಟುವಟಿಕೆಗಳಲ್ಲಿ ಇದ್ದವೆ. ಅವು ಮುಸ್ಸಂಜೆ ಹೊತ್ತಿಗೆ ಬಂದ್ ಸೇರ್‌ದು. ಅದಕ್ಕಾಗಿ ಅವು ಬಂದ ಮೇಲೆ ಕೊಡೊಕು. ಇದನ್ನ ಪೂರ್ತಿಯಾಗಿ ಅಲ್ಲತ್ತೇಳಿಕೆ ಆಕಿಲೆ. ಈಗಳೂ ಹೇಳ್ತಳೊ ಮುಸ್ಸಂಜೆ ಹೊತ್ತಿಗೆ ಯಾರ್ ಸಹ ಮೂಡ್‌ನ ಬಾಗ್‌ಲ್‌ಲಿ ನಿಲ್ಲಿಕಾಗದ್, ಮೆಟ್ಟ್‌ಲ್‌ಲಿ ಕೂರ್‌ಕಾಗದ್, ಗೋದೆಗಂಬಕ್ಕೆ ಒರಗಿ ನಿಲ್ಲ್‌ಕಾಗದ್ ತ್ತೇಳುವಂತ ಒಂದು ಪದ್ಧತಿ ಅಂದ್‌ಂದ ಇಂದ್ ಮುಟ್ಟ ನಡಿಯುತ್ತುಟ್ಟು. ಈ ಎಲ್ಲಾ ಕಾರಣಗಳಿಂದ ಕಾರ್ತಿಂಗಳಲಿ ಆದಿತ್ಯವಾರನೇ ದೆವ್ವ ದೇವರ್‌ಗಳಿಗೆ ಕೊಡ್ದು, ಕಾರಣಕ್ಕೆ ಹಾಕುವ ಪದ್ದತಿನ ಇಟ್‌ಕಂಡ್ ಹಂಗೆನೇ ನಡ್ಸಿಕಂಡ್ ಬರ್‌ತ್ತೋಳೊ. ಇದ್ ಎಲ್ಲವುಕ್ಕೂ ಅನುಕೂಲವಾದ ಸಮಯ.

* * * * *

# ದೈವ ದೇವರಿಗೆ ಕೊಡುವ ಕ್ರಮ:

ಕುಟುಂಬ ಮತ್ತೆ ಕುಟುಂಬಕ್ಕೆ ಸಂಬಂಧಿಸಿದ ಭೂಮಿಲಿ ದೈವ ಕಾರಣವು ಅಲ್ಲದೆ ಭೂಮಿಗೆ ಸಂಬಂಧ ಪಟ್ಟ ಚಾಮುಂಡಿ, ಗುಳಿಗ, ಸಹ ಇದ್ದದೆ.

ಈ ಎಲ್ಲಾ ದೈವ ದೇವರಿಗೆ ಸುರುಗೆ (ಮೊದಲಿಗೆ) ಗೊನೆ ಕಡ್ಡವೆ. ಇದಕ್ಕೆ ಸಂಬಂಧ ಪಟ್ಟಂಗೆ ಆಯಾಯ ಕುಟುಂಬಸ್ತರು ಒಬ್ಬನ ಆರಿಸಿಕೊಂಡಿದ್ದವೆ. ಆ ವ್ಯಕ್ತಿ (ಅಂದರೆ ಅವುಕೆ ಪೂಜಾರಿತ್ತೇಳುವೆ) ದೈವ ದೇವರಿಗೆ ಕೊಡಿಕೆ ಒಂದು ವಾರತ್ತೇಳಿರೆ ಇಲ್ಲಿ ಗೊನೆ ಕಡ್ದಲ್ಲಿಂದ ಎಂಟನೆ ದಿನ ಆಗಿದ್ದದೆ.

## ನಮ್ಮ ಕುಟುಂಬದ ಪದ್ದತಿ :

ಒಂದು ಆದಿತ್ಯವಾರ ಕುಟುಂಬದವು ಎಲ್ಲಾ ಸೇರಿ ನೆಲ್ಲಕ್ಕಿ ಮುಂದೆ ನಮ್ಮ ಪೂಜಾರಿ ಆಗಿರುವಂತ (ಅವರ ಹೆಸರ್) ಹೇಳಿ ಅವು ಇಂದ್ ನಮ್ಮ ಪೂರ್ವ ಪದ್ದತಿ ಪ್ರಕಾರ ದೈವಗಳಿಗೆ ಮೂರ್ತಿಗಳಿಗೆ ಹಂಗೆ ಭೂಮಿ ಚಾಮುಂಡಿಗೆ ಕೊಡಿಕೆ ಗೊನೆ ಕಡ್ಡವೆತ್ತೇಳಿ ಕಂಡ್ ಅ ಪೂಜಾರಿ ಕತ್ತಿ ತಕಂಡ್ ಕುಟುಂಬದ ನಾಲ್ಕೈದ್ ಹೈದಗಳ್ನ (ಅಥವಾ ಕುಟುಂಬಸ್ಥರನ್ನ) ಕರ್‌ಕಂಡ್ ಬಾಳೆ ಗೊನೆ ಇರುವ ಜಾಗಕ್ಕೆ ಹೋಗಿ ಮೂಡಕ್ಕೆ ಮುಖ ಮಾಡಿ ನಿಂತ್ ನಾವು ಕುಟುಂಬದವು ಸೇರಿಕಂಡ್ ಇಂದಿಗೆಂಟ್ ದಿನಲಿ ದೈವಗಳಿಗೆ ಮತ್ತೆ ಮೂರ್ತಿಗಳಿಗೆ ಕೊಡುದುತ್ತೇಳಿ ನಿಶ್ಚಯಿಸಿ ಕಂಡಂಗೆ ನಾನ್ ದೈವದ ಹೆಸರೇಳಿ ಗೊನೆ ಕಡ್ದದೆ. ಆ ಬಾಳೆ ಬೀಳಕಾಕನ ಗೊನೆ ನೆಲಕ್ಕೆ ಮುಟ್ಟದಂಗೆ ಅಂದರೆ ಅದರ ಕೂಂಬೆ ಮುರಿಯದಂಗೆ ಅವರೊಟ್ಟಿಗೆ ಬಂದ ಕುಟುಂಭಸ್ತರ್ ಬಾಳೆನ ಗಟ್ಟಿಯಾಗಿ ಹಿಡ್‌ಕಣೊಕು. ಪೂಜಾರಿ ಬರೀ ಗೊನೆನ ಮಾತ್ರ ಕಡ್ಕಂಡ್ ಬಾಳೆನ ಕತ್ತರಿಸದೇ ಬಿಟ್ಟವೆ. ಅದಾದ ಮ್ಯಾಲೆ ಚೌಂಡಿಗೆ ಕೊಡುದಿದ್ದರೆ ಕಾರಣ ಕೆಲವು ಚೌಂಡಿಗೆ ಹಿಂದೆ ಮುಂದೆ

ಮಾಡುವಂತ ಸಂದರ್ಭಗ ಇದ್ದದೆ. ಅದೇ ರೀತಿ ಚೌಂಡಿನ ನೆನೆಸಿಕಂಡ್ ಬಾಳೆ ಕಡ್ದವೆ. ಅದರ ಗೊನೆನ ಕಡ್ದ್ ನೆಲಕ್ಕೆ ಬೀಳದಂಗೆ ಕೊಂಬೆ ಮುರಿಯದಂಗೆ ಒಟ್ಟಿಗೆ ಇದ್ದವು ಹಿಡ್ಕಂಡವೆ. ಈ ಎರಡ್ ಗೊನೆ ಅದಲ್ ಬದಲಾಗದಂಗೆ ನೋಡಿಕಂಡ್ ಮನೆಗೆ ತಂದವೆ. ಮನೆಯ ಮೂಡಣ ಮೆಟ್ಟ್‌ಲ್‌ಲಿ ಇಟ್ಟಿದ್ದವೆ. ಸುರ್‌ಗೆ ಒಂದ್ ಬಿಂದಿಗೆ ನೀರ್ ತಂದಿಟ್ಟದ್ದವೆ. ಅಲ್ಲಿದ್ದವರೊಬ್ಬ ಬಾಳೆ ಗೊನೆಗಳಿಗೆ ನೀರ್ ಹೊಯ್ದವೆ. ಗೊನೆ ಕಡ್ದವನ ಕಾಲಿಗೆ ನೀರ್ ಹೊಯ್ದವೆ. ಎರಡ್ ಗೊನೆಗಳ್ನ ತಕೊಂಡೋಗಿ ನೆಲ್ಲಕ್ಕಿ ಅಡಿಲಿ ಇಟ್ಟವೆ. ಅಲ್ಲದ್ದ ಕುಟುಭಸ್ತರ ಕೈಗೆ ಅಕ್ಕಿಕಾಳ್ ಕೊಟ್ಟ್ ಹಿರಿಯವು ಒಂದೆರಡ್ ಮಾತ್‌ಗಳ್ನ ಈ ಕೆಳಗಿನಂಗೆ ಹೇಳಿಕಂಡವೆ.

ಇಲ್ಲಿ ಕೂಡಿದ ಒಂದೆರಡ್ ಹಿರಿಯರ ಹೆಸರ್‌ನ ಹೇಳಿ ಮತ್ತೆ ನಮ್ಮ ಕೂಡಿದ ಕುಟುಂಭಸ್ತರ ಮುಂದೆ ಈ ನೆಲ್ಲಕ್ಕಿ ಅಡಿಲಿ ಹೇಳಿಕೊಂಬದು ಏನ್ತ್ತೇಳಿರೆ ನಾವು ನಮ್ಮ ಪೂರ್ವ ಪದ್ದತಿ ಪ್ರಕಾರ ಕಾರ್ತಿಂಗಳಲಿ ದೆವ್ವಗಳಿಗೆ ಮತ್ತೆ ಚೌಂಡಿಗೆ ಕೊಡುವ ಪದ್ದತಿ. ಅದೇ ಪ್ರಕಾರ ಪೂಜಾರಿಯಾಗಿ ನಿಂತ (ಅವರ ಹೆಸರ್) ಇಂದ್ ದೆವ್ವಗಳ ಹೆಸರಲಿ ಮತ್ತೆ ಚಾಮುಂಡಿ ಹೆಸರ್‌ಲಿ ಗೊನೆ ಕಡ್ದೊಳೊ. ಹಂಗೆನೆ ಇಂದಿಗೆ ಎಂಟ್ ದಿನಲಿ ದೆವ್ವಗಳಿಗೆ ಮತ್ತೆ ಚಾಮುಂಡಿಗೆ ಕೊಡ್ದುತ್ತೇಳಿ ಏರ್ಪಾಡ್ ಮಾಡಿಕೊಂಡೊಳೊ. ಈ ಕಡ್ದಂತ ಗೊನೆನ ಅಂದಿಗೆ ಹೂ ಹಣ್ ಮಾಡಿಕೊಡಕು. ಈ ಪೂಜೆ ಪುರಸ್ಕಾರ ನಡೆಯುವವರೆಗೆ ಯಾವುದೇ ತೊಂದರೆ ಗಳಾಗದಂಗೆ ಈ ಕಾರ್ಯಕ್ರಮಕ್ಕೆ ಬೇಕಾದ ಬ್ಯಾಲೆಕಾರ (ಮಲೆಯ) ಅಂದರೆ ಇದ್ ನಮ್ಮ ಮನೆ ಪದ್ದತಿ. ಚಾಮುಂಡಿಗೆ ಕೊಡ್ದು ಮಲೆಯನಿಂದ ಆದರ್‌ಂದೆ ಚಾಮುಂಡಿ ಮತ್ತೆ ಮಲೆಯನ ಬಗ್ಗೆ ಬರ್ದದ್. ನಮ್ಮ ಕುಟುಂಭಲಿ ಯಾವುದೇ ಕೋಲಗಳ್ನ ಕಟ್ಟುವ ಪದ್ಧತಿ ಇಲ್ಲೆ. ಅದಕ್ಕಾಗಿ ಈ ಮಲೆಯನಿಂದ ಮೂರ್ತಿಗಳಿಗೆ ಕೊಡುವ ಪದ್ಧತಿನ ಅವರವರ ಕುಟುಂಭದ ದೆವ್ವ ದೇವರಿಗೆ

ಸಂಬಂಧಪಟ್ಟಂಗೆ ಮಾಡಿಕಣಕ್. ನೆಲ್ಲಕ್ಕಿ ಎದರ್ ಇದ್ದ ಸ್ವಾಮಿ ದೀಪಕ್ಕೆ ಅಕ್ಕಿ ಹಾಕಿವೆ. ಮತ್ತೆ ಗೊನೆಗೆ ಅಕ್ಕಿ ಹಾಕುವೆ ಈ ಗೊನೆನ ಅಟ್ಟಕ್ಕೆ ತಕಂಡ್ ಹೋದವೆ. ಅಟ್ಟಕ್ಕೆ ತಕ್ಕೊಂಡ್ ಹೋಕಾಕನ ಪೂಜಾರಿ ಉರಿಯುವ ಬತ್ತಿ ಅಥವಾ ದೀಪ ಹಿಡ್‌ಕಂಡ್ ಮುಂದೆ ಹೋಕು. ಅಟಕ್ಕೆ ಹತ್ತಿ ಗೊನೆ ಕಟ್ಟುವ ಜಾಗಲಿ ಗೊನೆ ಕಟ್ಟಿ ಇಟ್ಟವೆ. ಗಂಧ ಹೊಗೆ ಹಾಕುವೆ. ಅಥವಾ ಊದುಬತ್ತಿ ಹೊಗೆ ಹಾಕುವೆ. ದೇವರ್ನ ಬೇಡಿಕಂಡ್ ಕೈ ಮುಗ್ದ್ ಬಂದವೆ ಇಲ್ಲಿಂದ ಮುಂದೆ ಐನ್‌ಮನೆಲಿ ಬಹಳ ಶುದ್ಧ ಮಾಡಿಕಂಡ್ ಇರೊಕು. ಗೊನೆ ಕಡ್ದವು ಪಟ್ಟೆದಾರರ್ ದೆವ್ವಗಳಿಗೆ ಕೋಳಿ ಕೊಲ್ಲುವವು ಎಡೆ ಇಕ್ಕುವವು ಅತ್ಯಂತ ಶುದ್ಧ ಮುದ್ರಿಕೆಲಿ ಇದ್ದೆ ಇರೊಕು.

## ದೆವ್ವಗಳಿಗೆ ಕೊಡುವ ಕ್ರಮ :

ನಮ್ಮ ಮನೆಲಿ ದೆವ್ವಗಳಿಗೆ ಕೊಡುವ ದಿನದಂದ್ ಪೂಜಾರಿ, ಪಟ್ಟೆದಾರ ಹಂಗೆ ಕೋಳಿ ಕೊಲ್ಲುವವು ಫಲಹಾರಲಿ ಇದ್ದವೆ. ಕುಟುಂಬಸ್ತರ್ ಎಲ್ಲವೂ ಅವರವರ ಕೋಳಿಗಳ್ನ ತಕಂಡ್ ಬಂದವೆ ಹಂಗೆನೆ ಹರಿಕೆ ಕೋಳಿ ಬಂದಿದದ್ದೆ. ಪೂಜಾರಿ ಹಂಗೆನೆ ಮಿಯ್ದ್ ಬಿಳಿ ಪಂಚೆ ಉಟ್ ಬಂದ್ ಮೂಡ್‌ನ ಮೆಟ್‌ಲ್‌ಲಿ ನಿಂತವೆ. ಒಂದ್ ಬಿಂದಿಗೆ ನೀರ್ ಸಹ ತಂದ್ ಇಟ್‌ಕಂಡ್ ಒಂದ್ ಚೆಂಬುಗೆ ಅದನ್ನ ಬಗ್ಗಿಸಿಕಂಡ್ ಅದೇ ಹೊತ್ತಿಗೆ ನೆಲ್ಲಕ್ಕಿ ದೀಪ ಹೊತ್ತಿಸಿದ್ದವೆ. ಮೆಟಲ್ ಹತ್ತಿರ ನಿಂತ್ ಹಿರಿಯವು ಅಥವಾ ಪೂಜಾರಿ ಹೇಳಿಕಂಡವೆ. ನಾವು ಪ್ರತಿ ವರ್ಷ ಕಾರ್ತಿಂಗಳ್‌ಲಿ ದೆವ್ವಗಳಿಗೆ ಕೊಡವಂತ ಪದ್ಧತಿ ಇಟ್‌ಕಂಡಳೊ. ಅದೇ ರೀತಿ ಇಂದಿಗೆ ಎಂಟ್ ದಿನದ ಹಿಂದೆ ದೆವ್ವಗಳ ಹೆಸರೇಳಿ ಗೊನೆ ಕಡ್ದೊಳೊ. ಈಗ ದೆವ್ವಗಳಿಗೆ ಮತ್ತೆ ಪಾಷಣಾಮೂರ್ತಿಗೆ ಎಡೆ ಇಕ್ಕಿಗಾಗಿ ಕೋಳಿ ಕೊಂದವೆ. ನಾವು ಮಾಡುವಂತ ಈ ಕಾರ್ಬಾರಲಿ ಅನೇಕ ತಪ್ಪುನೆಪ್ಪು ಬಾದು ಅದನ್ನ ಒಪ್ಪು ಪಾಲಿಸಿಕಂಡ್ ನಮ್ಮ

ನೂರಾರ್ ಕುಟುಂಭಸ್ತರಿಗೂ ಹೋದಲ್ಲಿ ಬಂದಲ್ಲಿ, ದನಕರ್‌ಗಳಿಗೂ, ಬಿತ್ತ್‌ಬೆಳೆಗೂ ಯಾವುದೊಂದು ತೊಂದರೆಯಾಗದಂಗೆ ರಕ್ಷಣೆ ಮಾಡೊಕುತಾ ಬೇಡಿಕಂಡ್ ಕೈ ಮುಗಿದ್ ಕೋಳಿ ಕಾಲ್‌ಗೆ ನೀರ್ ಹೋಯ್ದುವೆ. ಪ್ರತಿಯೊಂದು ಕೋಳಿನ ಕೊಲ್ಲಿಕೆ ಮುಂದೆ ಈ ಕೋಳಿ ಭಕ್ತಿ ಕೋಳಿ, ಹರ್‌ಕೆ ಕೋಳಿ ದೆವ್ವಕ್ಕೆ (ಕಲ್ಲುಡ್‌ದೆವ್ವಕ್ಕೆ) ಹಂಗೆನೇ ಆ ವ್ಯಕ್ತಿ ಯಾಕೆ ಹರಿಕೆ ಮಾಡಿಕಂಡದ್ ಅದ್‌ರ್‌ಂದ ಸುಖ ಸಿಕ್ಕುಟ್ಟಾ ಅ ಕೋಳಿನ ಕೊಂದವೆ. ಉಳಿದಂಗೆ ಭಕ್ತಿ ಕೋಳಿಗಳ್ನ ಕೊಂದವೆ. ಈ ಕೋಳಿಗಳ್ನ ಕೊಂದ್ ಮೆಟ್‌ಲ್‌ಲಿ ಬಲಭಾಗಕ್ಕೆ ದೆವ್ವಗಳಿಗೆ ಇರುವ ಕೋಳಿನ ಬಿಸಾಡುವೆ. ಹಂಗೆನೆ ಭಕ್ತಿಕೋಳಿನ ಸುರುಲೀ ಕೊಂದ್ ಹಾಕಿದನ್ನ ಗುರ್‌ತ್ ಮಾಡಿಕಂಡಿದ್ದವೆ. ಹಂಗೆನೆ ಮೆಟ್‌ಲ್‌ಲಿ ಎಡಭಾಗಕ್ಕೆ ಪಾಷಣ ಮೂರ್ತಿಗೆ ಇರುವ ಭಕ್ತಿಕೊಳಿನ ಕೊಂದ್ ಹಾಕುವೆ, ಮತ್ತೆ ಹರಿಕೆ ಕೋಳಿಗ ಇದ್ದರೆ ಅದನ್ನ ಹೇಳಿಕಂಡ್ ಕೊಂದ್ ಹಾಕುವೆ. ಹಂಗೆನೆ ಎಲ್ಲಾ ಕೋಳಿಗಳ್ನ ಕೊಂದ್ ಹಾಕಿದ ಮ್ಯಾಲೆ ಕೋಳಿ ಕೊಂದವು ಮತ್ತೆ ಪೂಜಾರಿ ಸೇರಿಕಂಡ್ ಸುರುಗೆ ಕೊಂದ್ ಎರಡ್ ಬದಿಗಳಿಗೆ ಹಾಕಿದ ಕೋಳಿ ಹೆಂಗೆ ಬಿದ್ದುಟ್ಟುತಾ ನೋಡಿ ಆ ಎರಡ್ ಕೋಳಿ ಗಳಿಗೆ ನೀರ್ ಹಾಕಿ ಸ್ವಲ್ಪ ತೆರ್ಕಿಸಿ ಬುಟ್ಟವೆ. ಮತ್ತೆ ಕುಟುಂಭದವೆಲ್ಲಾ ಸೇರಿಕಂಡ್ ಆ ಕೋಳಿಗಳ್ನ ಬ್ಯಾರೆ ಬ್ಯಾರೆ ಅಂದರೆ ದೆವ್ವಗಳಿಗೆ ಕೊಂದ ಕೋಳಿಗಳ್ನ ಮತ್ತೆ ಪಾಷಾಣಮೂರ್ತಿಗೆ ಕೊಂದ ಕೋಳಿ ಗಳ್ನ ಬ್ಯಾರೆಬ್ಯಾರೆ ಮಾಂಸ ಮಾಡಿ ತಂದ್ ಪೂಜಾರಿಗೆ ಅಡುಗೆ ಮಾಡಿಕೆ ಕೊಟ್ಟವೆ. ಈ ಕೊಂದ ಕೋಳಿಗಳ ಕರಳ್‌ಗಳ್ನ ದೆವ್ವಗಳಿಗೆ ಎಡೆ ಹಾಕಿ ಆಕೆ ಮುಟ್ಟ ನಾಯಿ ತಿನ್ನದಂಗೆ ಎತ್ತರಲೀ ಇಟ್ಟವೆ. ಕಾರಣ ಆ ಕೋಳಿಗಳ್ನ ನಾಯಿ ಮೊದಲೇ ತಿಂದರೆ ಅದ್ ಮಡೆ ಆದೆತ್ತೇಳುವ ಅಭಿಪ್ರಾಯಂದಗೆ.

ದೆವ್ವಗಳಿಗೆ ಕೊಂದ ಕೋಳಿನ ಅಡುಗೆ ಮಾಡುವ ಕ್ರಮ ಇದ್ ಪೂರ್ತಿಯಾಗಿ ಪೂಜಾರಿ ಆಗಿ ನಿತ್ತವೇ ಮಾಡೊಕುತ್ತೇಳುವ

ಪದ್ದತಿ ಅಂದ್ ಇತ್. ಈಗ ಪೂಜಾರಿಗೆ ತುಂಬಾ ತೊಂದರೆಯಾ ದೆಂತ ಹೇಳಿ ಕುಟುಂಬದ ಒಪ್ಪಿಗೆ ಪಡ್ದ್ ಹೊಲೆ ಇಲ್ಲದೇ ಇರುವ ಹೆಂಗಸರ್ ಸಹ ಶುದ್ಧ ಮುದ್ರಿಕೆಲಿ ಇದ್ದ್‌ಕಂಡ್ ಅಡುಗೆ ಮಾಡಿಕೆ ಸೇರಿಕಂಡವೆ. ದೆವ್ವಗಳಿಗೆ ಮತ್ತೆ ಪಾಷಾಣಮೂರ್ತಿಗೆ ಕೊಂದ ಕೋಳಿಗಳ್ನ ಬ್ಯಾರೆ ಬ್ಯಾರೆ ಮಾಂಸ ಮಾಡಿ ತಂದದರ್ನ ಬ್ಯಾರೆ ಬ್ಯಾರೆ ಸಾರ್ ಮಾಡೊಕು. ಅದಕ್ಕೆ ಉಪಯೋಗಿಸುವ ಸೆಡೆ ಸಹಾ ಬ್ಯಾರೆ ಬ್ಯಾರೆ ಆಗಿದ್ದದೆ. ಈಗ ಎಡೆ ಇಕ್ಕಿಕೆ ಬೇಕಾದ ರೊಟ್ಟಿ ಎಷ್ಟ್ ಎಡೆಗೆ ಎಷ್ಟ್ ಕಲ್ಲ್‌ಡ್ ದೆವ್ವತ್ತೇಳಿರೇ ಪಾಷಣ ಮೂರ್ತಿಗಳಿಗೆ ಎಷ್ಟ್, ಪಂಜುರುಳಿಗೆ ಎಷ್ಟ್ ಎಡೆ ಇದನ್ನೆಲ್ಲಾ ಲೆಕ್ಕ ಹಾಕಿ ರೊಟ್ಟಿ ಮಾಡ್ತುವೆ. ಅಂದರೆ ಬೇಕಾದಕ್ಕಿಂತ ಹೆಚ್ಚಿಗೆ ರೊಟ್ಟಿ ಮಾಡ್ತುಲೆ. ಒಂದನ್ನ್ ಸಹ ಉಳಿಕೆ ಮಾಡುದುಲೆ, ಇದಕ್ಕೆ ಬೇಕಾದ ಅಕ್ಕಿ ಹೊಡಿನ ಅಕ್ಕಿ ತೊಳ್ಸಿ ಬೀಸಿ ಉಕ್ಕರಿಸಿ ಬಂದ ಮಾಡಿ ಅನ್ನ ಹಾಕದೇ ಕಲ್‌ಸಿ ಬೇಕಾದಷ್ಟ್ ರೊಟ್ಟಿಗಳಿಗೆ ಉಂಡೆ ಮಾಡಿ ರೊಟ್ಟಿ ಮಾಡಿಟ್ಟವೆ. ಉದಾ: ನಮ್ಮ ಮನೆಗೆ ಸಂಬಂಧಿಸಿದಂಗೆ ಈ ಕೆಳಗೆ ತಿಳಿಸಿನೆ.

ಮಂದಾರ ಮೂರ್ತಿ ( ಮಂದನ ಮೂರ್ತಿ) ಇದಕ್ಕೆ ಐದ್ ಹೊದರಿ ಎಡೆ, ದೆವ್ವಗಳಿಗೆ ಐದ್ ರೊಟ್ಟಿ ಎಡೆ, ಒಂದೊಂದು ಎಡೆಗೆ ಎರಡೆರಡ್ ರೊಟ್ಟಿಗ, ಘಾಷಣಾಮೂರ್ತಿಗೆ ಎರಡ್ ಎಡೆ, ಒಂದೊಂದ್ ಎಡೆಗೆ ಎರಡೆರಡ್ ರೊಟ್ಟಿಗ. ಸ್ವಲ್ಪ ದೂರಲಿ ಪಂಜುರುಳಿಗೆ ಒಂದ್ ಹೊದರಿ ಎಡೆ. ಒಟ್ಟು ಹದಿಮೂರು ಎಡೆಗ ಇದ್ದ್ ಅವರವರ ಕುಟುಂಭಕ್ಕೆ ಸಂಬಂಧಪಟ್ಟದಾಗುಟ್ಟು. ಒಂದೊಂದು ಎಡೆಗೂ ಮೂರು ಮೂರು ಸಣ್ಣ ಸಣ್ಣ ಚಳ್ಳಿಗೆ ಎರಡೆರಡ್ ಎಣ್ಣೆ ಬತ್ತಿಗಳ್ನ ಇಟ್ಟ್ ಪ್ರತಿಯೊಂದು ಎಡೆಗಳ ಒಂದೊಂದು ಚಳ್ಳಿಗಳಿಗೆ ಒಂದರ್‌ಲಿ ಕುರ್ದಿ, ಇನ್ನೊಂದರ್‌ಲಿ ಕಳ್ಳ್, ಮತ್ತೊಂದರ್ಲಿ ನೀರ್ ಇಟ್ಟಿದ್ದವೆ. ಈ ಎಡೆಗಳ ಹಿಂದೆ ಪ್ರತಿಯೊಂದು ಎಡೆಗೆ ಕೋಲ್‌ತಿರಿ ಕುತ್ತಿದ್ದವೆ.

## ಈಗ ಎಡೆ ಇಡುವ ಕ್ರಮ:

1. ಸುರುಗೆ ಅಟ್ಟಲಿ ಕಟ್ಟಿದ ಗೊನೆನ ಕುಟುಂಭಸ್ತರ್ ಮತ್ತೆ ಪೂಜಾರಿ ಸೇರಿಕಂಡ್ ಎಣ್ಣೆ ಬತ್ತಿ ಬೆಳ್‌ಕಲಿ ಅಟ್ಟಕ್ಕೆ ಹೋದವೆ. ಅಲ್ಲಿ ಕಟ್ಟಿಟ್ಟ ಬಾಳೆ ಗೊನೆನ ಕೈ ಮುಗದ್ ಬಿಚ್ಚಿ ತಂದವೆ ಎಡೆ ಇರುವ ಜಾಗಲಿ ಅಂದರೆ ಗಣಪತಿಗೆ ಇಡುವ ಜಾಗಲಿ ಇಟ್ಟವೆ, ಒಂದು ಮುಕ್ಕಾಲ್ ಮೇಲೆ ಗಣಪತಿಗೆ ಇಟ್ಟವೆ. ಮತ್ತೆ ಅದರ ಎಡ ಭಾಗಕ್ಕೆ ಅಂದರೆ ಎಡೆ ಇಕ್ಕವ ಬಲ ಭಾಗಕ್ಕೆ ಮಂಧಾರ ಮೂರ್ತಿಗಳಿಗೆ ಐದು ಬಾಳಲೆ ಹಾಕಿ ಅದಕ್ಕೆ ಒಂದೊಂದ್ ಎಡೆಗೆ ಎರಡೆರಡ್ ರೊಟ್ಟಿ ಇಟ್ ಎಡೆ ಸುರ್‌ಮಾಡ್‌ವೆ. ಅಲ್ಲಿಂದ ಸ್ವಲ್ಪ ದೂರಲಿ ಮೂಡನ

ಬಾಗ್‌ಲ್‌ನ ಎದುರಿಗೆ ಎರಡ್ ಎಡೆನ ಪಾಸಾಣಮೂರ್ತಿ ಹಾಕಿದ್ದವೆ. ಅದ್‌ಕ್ಕೆ ಸಹ ಒಂದು ಎಡೆಗೆ ಎರಡೆರಡ್ ರೊಟ್ಟಿ ಇಕ್ಕಿ ಎಡೆ ಮಾಡಿವೆ, ಇಲ್ಲಿ ಎರಡ್ ಪಾಸಾಣಮೂರ್ತಿ ಎಡೆ ಯಾಕೆತ್ತೇಳಿರೆ ಒಂದು ಕುಟುಂಭದ ಪಾಸಾಣಮೂರ್ತಿ ಇನ್ನೊಂದು ತಂದ ಗೊಡೆಗಳೊಟ್ಟಿಗೆ ಬಂದ್ ಪಾಲಿಸಿಕಂಡ ಪಾಸಾಣಮೂರ್ತಿ ಇದನ್ನ ಒಳಪಾಸಾಣಮೂರ್ತಿ ಮತ್ತೆ ಹೊರ ಪಾಸಾಣಮೂರ್ತಿ ತ್ತೇಳಿ ಸಹ ಕರ್‌ದವೆ. ಇದ್ ಎಲ್ಲಾ ಕುಟುಂಬಲಿ ಇಲ್ಲೆ. ಇನ್ನ್ ಸ್ವಲ್ಪ ದೂರಲಿ ಪಂಜುರುಳಿಗೆ ಎಡೆ ಹಾಕಿದ್ದವೆ. ಅದಕ್ಕೆ ಹೊದರಿ ಎಡೆ.

ಈಗ ಈ ಹಿಂದೆ ಹೇಳ್ದಂಗೆ ಎಲ್ಲಾ ಎಡೆಗಳಿಗೆ ಕಿಳ್ಳಲಿ ಕುರ್‌ದಿ, ಕಳ್ ಮತ್ತೆ ನೀರ್ ಇಟ್ಟಿದ್ದವೆ. ಮುಂದೆ ದೆವ್ವದ ಎಡೆಯ ಮ್ಯಾಲೆ ಇಟ್ಟಂತಾ ರೊಟ್ಟಿಗಳಿಗೆ ಅನ್ನ ಇಕ್ಕುವೆ. ಅದ್ ಸಹ ಸ್ವಲ್ಪ ಸ್ವಲ್ಪ ಮೂರು ಮೂರು ಸಲ ಇಕ್ಕದು ಮತ್ತೆ ಪಾಸಾಣಮೂರ್ತಿಗೆ ಮಾಡ್ದೆ ರೊಟ್ಟಿ ಮ್ಯಾಲೆ ಅನ್ನನ ಮೂರು ಮೂರು ಸಲ ಸ್ವಲ್ಪ ಸ್ವಲ್ಪ ಇಕ್ಕ್‌ವೆ. ದೆವ್ವಗಳಿಗೆ ಮತ್ತು ಪಾಸಾಣಮೂರ್ತಿಗಳಿಗೆ ಇದರ

ಎಡೆಗಳಲ್ಲಿ ಒಂದೊಂದು ದೊಡ್ಡ ದೊನ್ನೆಗಳ್ನ ಇಟ್ಟಿದ್ದವೆ. ದೊನ್ನೆ ಗಳಿಗೆ ಸುರ್‌ಗೆ ನೂಲ್ ಸುರ್‌ದ ಕರಿಯಡ ಬಟ್ಟೆಕಾಯಿಗಳ್ನ ಬ್ಯಾರೆಬ್ಯಾರೆ ಮಾಡಿ ಎಡೆ ಇಕ್ಕುವೆ. ಪಂಜುರುಳಿಗೆ ಒಂದು ಹೊದರಿ ಎಡೆ ಹಾಕಿದ್ದವೆ. ಮೂರ್ತಿಗಳಿಗೆ ಪೂಜಾರಿ ಎರಡ್ ಹಣ್ಣುಕಾಯಿ ಮಾಡ್ವೆ. ಬಾಳೆ ಗೊನೆಂದ ಹಣ್ ತೆಗ್ದ್ ಗಣಪತಿಗೆ ಹಂಗೆನೆ ಐದ್ ಹೊದರಿ ಎಡೆಗೆ ಮಡಗುವೆ. ಮತ್ತೆ ಪಂಜಿರ್‌ಳಿ ಎಡೆಗೆ ಒಂದು ಕೋಳಿನ ಪೂಜಾರಿ ಕೊಂದದೆ. ಎಲ್ಲಾ ಕೋಲ್ ತಿರಿಗಳ್ನ ಹೊತ್ತಿಸುವೆ, ಬತ್ತಿಗಳ್ನ ಹೊತ್ತಿಸುವೆ ಇಲ್ಲಿಂದ ವಿಶೇಷತೇಳಿರೆ ಕೊಂದ ಹುಂಜ ಕೋಳಿ ಕುಯ್ದ್ ಎಡೆ ಮೇಲೆ ಇಟ್ಟವೆ. ಅದ್‌ಕೆ ಕುರ್‌ದಿ ನೀರ್ ಹಾಕಿ ಹಿಡ್‌ಕಂಡವೆ. ಕೋಳಿ ಹಾರಾಡಿಕ್ಕಾಗದ್ ಇದ್ ಮನೆ ಮಾರ್ಯಾದಿ. ಇದನ್ನ ಸಂತೋಷಲಿ ಸ್ವೀಕರಿಸಿಕೊಣಕುತ್ತೇಳಿ ಸ್ವಲ್ಪ ಕುರ್‌ದಿ ನೀರ್ ಹಾಕುವೆ. ಈ ಕೋಳಿನ ಕುಯ್ಯಕೆ ಮುಂದೆ ಅದರ ಬಾಯಿಗೆ ಹೊದರಿಕೊಟ್ಟ್ ಸ್ವಲ್ಪ ಕುರ್‌ದಿ ನೀರ್ ಕುಡಿಸಿ ಒಂದೆರಡ್ ತೊಪ್ಪುಟನ ಕೋಲ್‌ತಿರಿಗೆ ಹಿಡ್ದ್ ಕರಿ ಬರ್‌ಸುವೆ ಆ ಕೋಯ್ದ ಕೋಳಿ ಒಂದಿಷ್ಟ್ ಹಾರಾಡದೇ ಆ ಎಡೆ ಮ್ಯಾಲೆ ಬರಿ ಕಾಲ್ ಅಲ್ಲಾಡಿಸಿಕಂಡ್ ಇದ್ದದೆ, ಇದಾದ ಮ್ಯಾಲೆ ಕುಟುಂಬಸ್ತ ರಿಗೆಲ್ಲಾ ಅಂದರೆ ಹೆಣ್ಣ್ ಜನರ್‍ನ ಬಿಟ್ಟ್ ಗಂಡ್ ಜನರಿಗೆಲ್ಲಾ ಬಿಟ್ಟ್ ಅಕ್ಕಿಕೊಟ್ಟವೆ. ಪೂಜಾರಿ ಎಲ್ಲಾ ಎಡೆಗಳಿಗೆ ಹೊಗೆ ಹಾಕಿದೆ ಊದು ಬತ್ತಿ ಹೊತ್ತಿಸುವೆ ಒಂದು ಕಡೆಂದ ಹೇಳಿಕಂಡ್ ಬಂದವೆ, ನಾವು ಕುಟುಂಭಸ್ಥರೆಲ್ಲವು ಸೇರಿ ಪ್ರತಿ ವರ್ಷ ಕಾರ್ತಿಂಗಳಲ್ಲಿ ದೆವ್ವಗಳಿಗೆ ಮತ್ತೆ ಮೂರ್ತಿಗಳಿಗೆ ಕೊಡುವಂತ ಪದ್ಧತಿ. ಅದೇ ರೀತಿ ಇಂದ್ ಪೂಜಾರಿಯಾಗಿ ನಿಂತವು ನಮ್ಮ ಮಂದನ ಮೂರ್ತಿಗಳಿಗೆ ಎಡೆ ಇಕ್ಕಿಳೊ ಇದ್‌ರಲಿ ಮಾಡಿದಂತ ಕ್ರಮಗಳಲ್ಲಿ ಯಾಗಲಿ ಇಕ್ಕಿದಂತ ಎಡೆಲಾಗಲಿ ಅನೇಕ ಶಾಸ್ತ್ರ ತಪ್ಪುಗಳಿರುದು ತಿಳಿಯದೆ ಮಾಡ್ದ ಯಾವುದೆ ತಪ್ಪುಗಳಿದ್ದರು ಅದನ್ನೆಲ್ಲಾ ಮನ್ನಿಸಿ ಈ ಇಕ್ಕಿದಂತ ಎಡೆನ ಸ್ವೀಕರಿಸಿ ಕಂಡ್ ನಮ್ಮ ನೂರಾರ್

ಕುಟುಂಭಸ್ಥರಿಗೂ, ದನಕರುಗಳಿಗೆ, ಬಿತ್ತ್‌ಬೆಳೆಗಳಿಗೆ ಹೋದಲ್ಲಿ ಬಂದಲ್ಲಿ ಯಾವುದೊಂದ್ ತೊಂದರೆ ಕೊಡದೆ ನಮ್ಮನ್ನ ಬೇಲಿಯಾಗಿ ನಿಂತ್ ರಕ್ಷಣೆ ಮಾಡಿಕೊಡೋಕುತ್ತೇಳಿ ಬೇಡಿ ಕೊಂಡವೆ. ಅಲ್ಲಿಂದ ಮುಂದಕ್ಕೆ ಹೋಗಿ ದೆವ್ವಕ್ಕೆ ಇಕ್ಕಿದ ಎಡೆಯ ಮುಂದೆ ನಿಂತ್ ಹಿಂದೆ ಹೇಳ್ದಂಗೆ ಹೇಳಿಕಂಡವೆ. ಅಲ್ಲಿಂದ ಮುಂದಕ್ಕೆ ಹೋಗಿ ಪಾಷಣಮೂರ್ತಿಗೆ ಇಕ್ಕಿದ ಎಡೆಯ ಮುಂದೆ ನಿಂತ್ ಹಿಂದೆ ಹೇಳ್ದಂಗೆ ಹೇಳಿಕಂಡವೆ.

ಅಲ್ಲಿಂದ ಮುಂದಕ್ಕೆ ಹೋಗಿ ಪಂಜರುಗಳಿಗೆ ಇಕ್ಕಿದ ಎಡೆಯ ಮುಂದೆ ನಿಂತ್ ಅದೇ ರೀತಿಯಾಗಿ ಹೇಳಿಕಂಡವೆ. ಇದಾದ ಮ್ಯಾಲೆ ಎಲ್ಲವು ಎಲ್ಲಾ ಎಡೆಗಳಿಗೆ ಅಕ್ಕಿ ಹಾಕಂಡ್ ಬಂದವೆ. ಆಗ ಪೂಜಾರಿ ಹೇಳದೆ ಎಲ್ಲವರ್ದ್ ಅಕ್ಕಿ ಹಾಕಿ ಆತಾ, ಹಿಂತುರುಗಿ ನಿಂತ್ಕಣಿತ್ತೇಳಿ ಎಲ್ಲವು ಒಂದ್ ನಿಮಿಷ ತಿರುಗಿ ನಿಂತ್ ಮತ್ತೆ ತಿರುಗಿ ದೆವ್ವ ದೇವರುಗಳಿಗೆ ನಮಸ್ಕಾರ ಮಾಡಿವೆ. ಇದಾದ ಮ್ಯಾಲೆ ಪೂಜಾರಿ ಎಲ್ಲಾ ಎಡೆಗಳಿಗೆ ನೀರ್ ಹಾಕಿ ಮಂದನಮೂರ್ತಿಗಳ ಎಡೆಗಳಿಂದ ಒಂದೆಡೆನ ಸ್ವಲ್ಪ ಮುಂದಕ್ಕೆ ಎಳ್ದವೆ. ದೆವ್ವಗಳ ಎಡೆಯಿಂದ ಒಂದೆಡೆನ ಸ್ವಲ್ಪ ಎಳ್ದವೆ. ಮತ್ತೆ ಪಾಷಣ ಮೂರ್ತಿ ಎಡೆಯಿಂದ ಒಂದೆಡೆನ ಸ್ವಲ್ಪ ಎಳ್ದವೆ. ಕಡೆಗೆ ಪಂಜುರುಳಿ ಎಡೆನ ಸ್ವಲ್ಪ ಎಳ್ದವೆ. ಇದಾದಂಗೆ ಕುಟುಂಬಸ್ಥರ ಕೆಲವು (ಹುಡುಗರ್ನ) ಯೌವ್ವನಸ್ಥರನ್ನ ಕರ್‌ಕಂಡ್ ಎಲ್ಲಾ ಎಡೆಲಿ ಇದ್ದಂತಾ ಕಳ್ಳ್, ಕೋಲ್ ತಿರಿಗಳನ್ನ ತೆಗೆದ್‌ಕಂಡ್ ಈ ಪಂಜುರುಳಿ ಎಡೆಯೊಟಿಗೆ ಹಾಕುವೆ. ಅದನ್ನ ಪೂಜಾರಿ ಮತ್ತೊಂದು ಎರಡು ಜನರನ್ನ ಕರ್‌ಕಂಡ್ ಹೋಗಿ ಕುರ್ದಿ ಸಮೇತ ತಕ್ಕೊಂಡೋಗಿ ಒಂದು ಜಾಗಲಿ ನೀಕಿ ಕುರ್ದಿ ನೀರ್ ಹ್ಯೊದ್ ಬಂದವೆ. ಮತ್ತೆ ಮಂದನಮೂರ್ತಿಗಳಿಗೆ ಇಕ್ಕಿದ್ದಂತ ಹೊದ್ರಿ ಎಡೆನ ತೆಗೆದ್ ಒಂದ್ ಎಡೆನ ಊರಿಗೆ, ಇನ್ನೊಂದ್ ಎಡೆನ ನೆಂಟರಿಗೆ ಮತ್ತೊಂದೆಡೆನ ಪೂಜಾರಿಗೆ ಪದ್ಧತಿ ಪ್ರಕಾರ ಕೊಟ್ಟವೆ. ಉಳಿದ ಎರಡ್ ಎಡೆನ

ಕುಟುಂಬಸ್ಥರೆಲ್ಲ ಹಂಚಿ ತಿಂದವೆ. ಈ ಪಂಜರುಳಿಗೆ ಕುಯ್ದು ಕೋಳಿನ ಒಂದೆರೆಡ್ ಹುಡ್‌ಗರ್ ಸೇರ್ಕಂಡ್ ಸರಿ ಮಾಡಿ ಸಾರ್ ಮಾಡಿಕೆ ಕೊಟ್ಟವೆ. ಹಂಗೆನೆ ದೆವ್ವಗಳಿಗೆ ಎಡೆ ಇಕ್ಕಿದ ಎಲ್ಲಾ ಎಡೆಗಳ್ನ ತೆಗ್ದ್ ಬೇರೆ ಮಡ್‌ಗಿವೆ. ಮತ್ತೆ ಪಾಷಣಮೂರ್ತಿಗಳಿಗೆ ಎಡೆ ಇಕ್ಕಿದ ಎಡೆಗಳ್ನ ಬೇರೆ ಇಟ್ಟವೆ. ಇದ್ರಲ್ಲಿ ದೆವ್ವಗಳಿಗೆ ಇಕ್ಕಿದ ಒಂದ್ ಎಡೆನ ತೆಗ್ದ್ ಕಾರಣಕ್ಕೆ ಹಾಕುವ ಪದ್ಧತಿ ಪ್ರಕಾರ ಹಾಕುವೆ. ಪಾಷಣಮೂರ್ತಿನ ಎಡೆನ ಬೇರೆನೆ ಇಟ್ಟಿದ್ದವೆ. ಇಲ್ಲಿ ಒಂದ್ ವಿಶೇಷತ್ತೇಳಿರೆ ಇದ್ ನಡ್ಪು. ದೆವ್ವ ದೇವರುಗಳಿಗೆ ಗಂಡ್ ಜನ ಮಾತ್ರ ಎಡೆಗೆ ಅಕ್ಕಿ ಹಾಕುದು. ಅದ್ ಯಾಕೆತ್ತೇಳಿ ತಿಳ್ದವರನ್ನ್ ಕೇಳಿರೆ ಅಣ್ಣಪ್ಪ ಪಂಜುರುಳಿಗೆ ಹೆಂಗಸ್ಸರನ್ನ ಸೇರಿಸಿ ದೇವಸ್ಥಾನಗಳಲ್ಲಿ ಪೂಜೆ ಮಾಡ್ದುಲೆ. ಅದೇ ಪದ್ಧತಿನ ಆಚರಿಸಿಕಂಡ್ ಬಂದೊಳೊ ಇಲ್ಲಿ ಪಂಜರುಳಿಗೆ ಕೋಳಿ ಕುಯ್ದು ಎಡೆ ಹಾಕುದರ್‌ಂದ ಹೆಣ್ಣ್‌ಮಕ್ಕ ಬಾದುಲೆ. ಇದರ ಮ್ಯಾಲೆ ಚರ್ಚೆ ಇಲ್ಲೆ, ಇದ್ ಒಂದ್ ನಡ್ಪು ಆಗಿಯೇ ಅಂದ್ ಇತ್ತ್, ಇಂದು ಉಟ್ಟು, ಇನ್ನ್ ಮುಂದಕ್ಕೂ ನಡ್ಸ್‌ಕಂಡ್ ಹೋಗುವ ಸಂದರ್ಭ ಉಟ್ಟು.

ಇನ್ ಕುಟುಂಭಸ್ಥರೆಲ್ಲವು, ನೆಂಟ್ರ್, ಊರವು ಸೇರಿ ಬಾಡೆಲಿ ಊಟಕ್ಕೆ ಕುದ್ದವೆ. ಜಾಗದ ಅನಾನೂಕೂಲತೆ ಇದ್ದರೆ ಕೈಯಾಲೆಲಿ ಸಹ ಕುದ್ದ್ ಊಟ ಮಾಡುವೆ. ಸುರ್‌ಗೆ ಗಂಡಸರಿಗೆ ಊಟ ಬಳ್ಸುದು. ಇಕ್ಕುದು ಸಹ ಪಟ್ಟೆದಾರಂಗೆ, ಪೂಜಾರಿಗಳಿಗೆ ಮುಂದೆ ಮತ್ತೆ ಎಲ್ಲವುಕೆ ಇಕ್ಕಿಕಂಡ್ ಹೋದವೆ. ಕುಟುಂಬದ ಹೆಣ್ಣ್ ಜನ ತುಂಬಾ ರೊಟ್ಟಿ ಮಾಡಿದ್ದವೆ. ಸುರ್‌ಗೆ ಮುರ್ದಂತಾ ರೊಟ್ಟಿನ ಇಕ್ಕಿಕಂಡ್ ಹೋದವೆ. ಒಟ್ಟಿಗೆ ಕೋಳಿ ಮಾಂಸ ಸಾರ್ ಹೋಳು ಬೇಕಾದಷ್ಟು ಇಕ್ಕುವೆ. ಇದನ್ನ ಹೆಣ್ಣ್ ಜನ ಮಾಡುವೆ. ಆ ಸಮಯಲಿ ದೆವ್ವಗಳಿಗೆ ಇಕ್ಕಿದ ಒಂದು ಎಡೆನ ಪೂಜಾರಿಗೆ, ಪಟ್ಟೆದಾರಂಗೆ, ಇನ್ನೊಂದು ಎಡೆನ ಚೂರುಚೂರು ಮಾಡಿ



6

ಕುಟುಂಬದ ಎಲ್ಲವುಕು ಇಕ್ಕಿವೆ. ಇನ್ನೊಂದು ಎಡೆನೆ ಊರ್‌ನವುಕೆ ಮತ್ತೊಂದು ಎಡೆನ ನೆಂಟರಿಗೆತ್ತೇಳಿ ಕೊಡುವಂತ ಪದ್ದತಿ. ಇದ್ ಆ ಕುಟುಂಭಸ್ತರ್ ಊರವುಕೆ ಮತ್ತೆ ನೆಂಟರಿಷ್ಟರಿಗೆ ಕೊಡುವಂತ ಗೌರವ ಇದ್ ಅಂದ್ ಇತ್ತ್, ಇಂದ್ ಉಟ್ಟು, ಇನ್ನ್ ಮುಂದೆ ಸಹ ನಡ್ನ್‌ಕಂಡ್ ಹೋದವೆ. ಈಗ ಪಾಷಾಣಮೂರ್ತಿ ಇಕ್ಕಿದ ಎರಡ್ ಎಡೆಗಳ್ನ ತಕಂಡ್ ಅದನ್ನ ಸಹ ಹಂಚಿವೆ. ಇದನ್ನ ಪ್ರಾಯಸ್ತ ಅಂದರೆ ವಯಸ್ಸಾದ್ ಹೊಲೆ ಇಲ್ಲದ ಹೆಂಗಸರ್ ದೆವ್ವಗಳಿಗೆ ಅಡುಗೆ ಮಾಡಿಕೆ ಸೇರಿದವುಕೆ ಗೌರವವಾಗಿ ಕೊಟ್ಟವೆ. ಇನ್ನೊಂದು ಎಡೆನ ಸಹ ಹಂಚಿಕಂಡವೆ, ಆದರೆ ಯಾವುದೇ ಕಾರಣಕ್ಕೆ ಪಾಸಾಣಮೂರ್ತಿ ಕಲ್ಲುರ್ಟಿ ದೆವ್ವದ ಎಡೆನ ಕೊಟ್ಟ ಗೂಡೆಗಳಿಗೆ ಕೊಡ್ದುಲೆ. ಯಾಕೆತ್ತೇಳಿರೆ ಒಂದು ಮನೆಲಿ ಒಂದು ಪಾಷಾಣಮೂರ್ತಿ ಇರ್ದು ಸಾಧಾರಣ, ಆದರೆ ಕೆಲವು ಕುಟುಂಭಲಿ ಎರಡ್ ಪಾಷಾಣಮೂರ್ತಿತ್ತೇಳಿ ಇದ್ದದೆ. ಈ ಹೊರ ಪಾಷಾಣ ಮೂರ್ತಿನ ಇನ್ನೊಂದ್ ಒಳ ಪಾಷಣಮೂರ್ತಿ. ಈ ಹೊರ ಪಾಷಣ ಮೂರ್ತಿನ ಮುಖ್ಯವಾದ ಕೆಲಸತ್ತೇಳಿರೆ ಕೊಟ್ಟ ಗೂಡೆಗಳ ಮನೆಗೆ ಹೋಗಿ ಅಲ್ಲಿ ನಾನಾತರದ ತೊಂದರೆಗಳ್ನ ಕೊಟ್ಟ್ ಅಲ್ಲಿ ನೆಲೆ ಪಡ್ಕಂಬದು. ಆದೇ ಕಾರಣಕ್ಕಾಗಿ ಆ ಎಡೆನ ಕೊಟ್ಟ್ ಹೆಣ್ಣ್ ಮಕ್ಕಳಿಗೆ ಹಂಗೆನೆ ಕೊಡುವಂತ ಯಾವುದೇ ಗೊಡೆಗಳಿಗೆ ಕೊಡ್ದುಲೆ. ಇದರೊಟ್ಟಿಗೆ ಇನ್ನೊಂದು ಮುಖ್ಯ ವಿಚಾರಗಳನ್ನು ತಿಳ್ಕೊಂಬುದು ಅದೇನ್‌ತ್ತೇಳಿರೆ ಈ ಪಾಷಾಣಮೂರ್ತಿನ ಇನ್ನೊಂದು ಉಪದ್ರತ್ತೇಳಿರೆ, ಗೂಡೆಗಳ್ನ ಮದುವೆ ಮಾಡಿ ಹೆಣ್ಣೆಳಿಸಿ ಕೊಡಕಾಕ್ಕನ ಅವರ್ನ ಮನೆಕಡೆ ತಿರ್‍ಗಿ ನೋಡ್‌ಬಡಿತ್ತೇಳುವೆ. ಯಾಕೆತ್ತೇಳಿರೆ ಆ ದೆವ್ವ ಅವರೊಟ್ಟಿಗೆ ಹೋದೆತ್ತೇಳುವ ಒಂದು ರೂಡಿಯಲ್ಲಿ ಇರುವಂತ ಪದ್ಧತಿ. ಇದ್ ಅಂದ್ ಇತ್, ಇಂದ್ ಉಟ್ಟು, ಇನ್ನ್ ಮುಂದಕ್ಕೂ ನಡ್ದದೆ. ಯಾಕೆತ್ತೇಳಿರೆ ಈ ದೆವ್ವದ ಕಾಟ ಬಹಳತ್ತೇಳ್ದು ಎಲ್ಲವುಕ್ಕೂ ಗೊತ್ತುಟು.

ಇದರ್‌ಲಿ ಒಂದು ಸತ್ಯ ಸಂಗತಿ, ಹಂಗೆನೆ ಒಂದು ತಮಾಷೆ ತಿಳಕಣಿ. ಪಾಷಾಣಮೂರ್ತಿತ್ತೇಳಿರೆ ಸತ್ಯದೇವತೆ ಇದ್ ಯಾರಿಗೂ ಮಾತ್‌ತಪ್ಪುದುಲೆ. ಹಂಗೆನೆ ಇದನ್ನ ಪೂಜಿಸಿಕಂಡ್ ಬರುವ ಕುಟುಂಬಸ್ಥರನ ಅಷ್ಟೇ ಎಚ್ಚರಿಕೆಂದ ಸಲಹಿಕಂಡ್ ಬಂದದೆ. ಈ ದೆವ್ವಗ ಇರುವಂತ ಒಬ್ಬ ನೆರೆ ಮನೆಯವನ ಮನೆಗೆ ಇನ್ನೊಬ್ಬ ನೆರೆಮನೆಯ ಹೋದೆ. ಹೋಕಾಕನ ಒಂದು ಸೋರೆಕಾಯಿ ಚಪ್ಪರಲಿ ತುಂಬಾ ಸೋರೆಕಾಯಿಗಳ್ನ ಅಂವ ಕಂಡದೆ. ಅಂವ ಸೀದಾ ನೆರೆಮನೆಯವರ ಮನೆಗೆ ಹೋದೆ ಅವರೊಟ್ಟಿಗೆ ಮಾತಾಡ್ದೆ. ಮತ್ತೆ ಕೇಳ್ದೆ. ನಾನ್ ಬಾಕಾಕನ ನಿಮ್ಮ ಸೋರೆಕಾಯಿ ಚಪ್ಪರ ನೋಡ್ದೆ. ನಂಗೊಂದು ಸೋರೆಕಾಯಿ ಕೊಡಿತಾ ಕೇಳ್ದೆ ಮನೆಂವ ಹೇಳ್ದೆ, ನೀವು ಹೋಕಾಕನ ಒಂದು ಸೋರೆಕಾಯಿನ ಕೊಯ್‌ಕಂಡ್ ಹೋಗಿತಾ. ಅಂವ ಏನ್ ಮಾಡ್ತ್ ಗೊತ್ತಾ, ಅಂತು ಇಂತು ಕೇಳಿಯೊಳೆ ಎರಡ್ ಕುಯಿಕಣಿತ್ತೇಳಿ ಅಂವ ಎರಡ್ ಕುಯ್ದದೆ. ಸ್ವಲ್ಪ ದೂರ ಹೆಗಲ್‌ಮ್ಯಾಲೆ ಇಟ್ಕಂಡ್ ಹೋದೆ. ಈ ಪಾಷಾಣ ಮೂರ್ತಿ ಅವನ ಹಿಂದೆ ಹೋದೆ ಅವನ ಮೈಗೆ ಸೊಂಕಿಕಂಡ್ ಆ ಎರಡ್ ಸೋರೆಕಾಯಿನ ಹೊತ್ತ್‌ಕಂಡ್ ಹಿಂದಕ್ಕೆ ಅವರ ಮನೆಗೆ ಕೊಣ್‌ಕಂಡ್ ಬಂದದೆ. ಆಗ ಅಂವ ಹೇಳ್ದ ಒಂದು ಪದ ಎಂತಾ ಗೊತ್ತ "ಕಂಡ್ ಒಂದ್, ಕಾಣದೆ ಒಂದ್, ನಾನ್ ಕುಯಿಕಂಡೆ", ಇದ್ ಸತ್ಯ ಒಂದು ಕುಟುಂಭಲಿ ಇದ್ ನಿಜಕಥೆ ಅದಕ್ಕಾಗಿ ಆ ಕುಟುಂಭದ ಹೆಸರ್‌ನ ನಾನ್ ಇಲ್ಲಿ ಬರ್‌ತಲೆ.

ಚಾಮುಂಡಿಗೆ ಕೊಡ್ದು ಮತ್ತೆ ಕಾರಣಕ್ಕೆ ಹಾಕುದು:

ಕಾರ್ತಿಂಗಳ್‌ಲಿ ಚಾಮುಂಡಿಗೆ ಕೊಡ್ದು ಮತ್ತೆ ಕಾರಣಕ್ಕೆ ಹಾಕುವ ಒಂದು ವಿಚಾರ. ಇದ್ ನಮ್ಮ ಕುಟುಂಬಕೆ ಸಂಬಂಧಿಸಿ ದನ್ನ ಮಾತ್ರ ನಾನ್ ಬರ್ದೊಳೆ. ಕಾರಣ, ನಾನ್ ಈ ಬಗ್ಗೆ ಬಹಳಷ್ಟು ಮನೆಗಳಲ್ಲಿ ವಿಚಾರ್ಸೊಳೆ, ಯಾಕೆತ್ತೇಳೀರೆ ಒಂದೊಂದು ಮನೆಲಿ ಒಂದೊಂದು ಪದ್ದತಿ, ಇನ್ನ್ ಕೆಲವು ಊರಿಗೊಂದು ಪದ್ಧತಿ

ಸಹ ಉಟ್ಟು. ಇದನ್ನ ಪ್ರಾರಂಭಿಸಿ ನೋಡ್‌ಕಾಕನ ನಾನ್ ಹಿಂದೆ ಹೇಳ್ದಂಗೆ ಅನಾದಿ ಕಾಲಲಿ ನಾವೆಲ್ಲಾ ಒಂದ್. ಅಲ್ಲಿಂದ ಹೊಟ್ಟೆ ಪಾಡಿಗಾಗಿ ಒಂದೊಂದು ಗುಂಪು ಕಟ್ಟಿಕಂಡ್ ಅದ್‌ಕೊಬ್ಬ ಗುರು, ಹಂಗೆನೆ ಹಿರಿಯವರ್‍ನ ಪಟ್ಟೆದಾರತ್ತೇಳಿ ಅವುಕು ಸಹ ಒಂದು ಬಿರುದು ಕೊಟ್ಕಂಡ್ ಅವುಕವುಕೆ ಸಿಕ್ಕಿದ ದಾರಿ ಹಿಡ್ದ್ ಒಂದೊಂದು ಕಾಡ್ ಮಧ್ಯಲಿ ಹೊರ್‍ಟ್ಹೋಗಿ ಎಲ್ಲಿ ನೀರ್, ಕಾಡ್ ಜಾಗ, ಹಂಗೆನೆ ಹೊಟ್ಟೆ ಪಾಡಿಗೆ ತಕ್ಕಂಗೆ ಬೆಳೆ ಬೆಳ್‌ಸಿ ಜೀವನ ಮಾಡುವಂತ ಜಾಗಲಿ ನೆಲೆಹಿಡ್ಕಂಡ್ ಅಲ್ಲಿ ಅವರದೆ ಆದ ನೀತಿ ನಿಯಮಗಳ್ನ ಮಾಡಿಕಂಡ್, ಅಂದರೆ ಪದ್ದತಿ ಮಾಡಿಕಂಡ್ ಜೀವನ ಸಾಗ್ಸ್‌ತ್ತಿದ್ದೋ. ಹಂಗೆನೆ ಅವು ಹಿಂದೆ ಕೊಟ್ಟ್ ಕೊಂಡಾಡ್‌ತಿದ್ದ ದೇವರ್‍ಗಳ್ನ ಅವರ್‍ದ್ದೆ ಆದ ಪದ್ದತಿಲಿ ನಡ್ಸಕಂಡ್ ಬಾಕೆ ಸುರ್ ಮಾಡ್ದೋ. ಅದ್ರಂದ ಅವರವರ ಅನುಭವಕ್ಕೆ ತಕ್ಕಂಗೆ ಒಳ್ಳೆದಾಗಿ ಅದೇ ರೀತಿ ಒಳ್ಳೆದ್‌ತ್ತೇಳಿ ಪೂಜಿಸಿಕೆ ಸುರ್ ಮಾಡ್ದೋ. ಅವರ ಮಕ್ಕಳಿಗೆ ಸಹ ಅದೆ ಪದ್ದತಿನ ಹೇಳಿಕೊಟ್ಟ್ ಅದನ್ನ ಅವರ ಮಕ್ಕ, ಮೊಮ್ಮಕ್ಕ, ಮರಿಮಕ್ಕ ರೂಡಿಸಿಕಂಡ್ ಬಂದೊ ಜನಸಂಖ್ಯೆ ಬೆಳ್ದ್ ಬಾತ್. ಕಾಡ್ ಜಾಗನ ಒತ್ತುವರಿ ಮಾಡಿಕಂಡ್‌ಬಾಕೆ ಸುರ್‌ಮಾಡ್ದೊ ಅದೇ ರೀತಿ ಇನ್ನೊಂದು, ಮತ್ತೊಂದು, ಮಗದೊಂದು ಗುಂಪ್‌ನವು ಮುಂದುವರೆಸಿಕಂಡ್ ಬಂದ್ ಸೇರ್‌ಕಂಡ್ ಒಂದ್ ಊರ್‌ತಾ ಮಾಡಿಕಂಡೊ. ಅದರೆ ಅವೆಲ್ಲಾ ಒಟ್ಟಿಗೆ ಸೇರಿ ಜೀವಿಸಿಕೆ ಕಲ್ತ್ ಅವರವರ ಮುತ್ತಜ್ಜನ ಕಾಲಂದ ನಡ್‌ಕಂಡ್ ಬಂದ ಪದ್ದತಿನ ಕೈ ಬುಟ್ಟತ್ತ್‌ಲೆ. ಅದ್‌ಕ್ಕಾಗಿ ಮನೆಗೊಂದ್ ಪದ್ದತಿ, ಮತ್ತೆ ಊರಿಗೊಂದ್ ಪದ್ದತಿ ಆಗಿ ಅದ್ ಅಂದ್‌ಂದ ಇಂದ್ ಮುಟ್ಟ ನಡ್‌ಕಂಡ್ ಬರುತುಟ್ಟು, ಇನ್‌ಮುಂದೆ ನಡ್ದದೆ. ಕಾರಣ ಈ ಆಚಾರ ವಿಚಾರಗಳಲ್ಲಿ ಒಂದು ಭಯ ಅಂದರೆ ಹೆದರಿಕೆ ಹುಟ್ಟಿಸುವಂತ ಶಕ್ತಿನ ತುಂಬಿಸಿ ನೀವು ಖಡ್ಡಾಯವಾಗಿ ಹಿಂಗೆ ನಡೆಯಕುತ್ತೇಳಿ ಹಿರಿಯವು

ಹೇಳಿಯೊಳೊ. ಅದನ್ನ ಬದಲಾಯಿಸಿಕೂ ಧೈರ್ಯ ಇಲ್ಲೆ. ಅದ್‌ಕ್ಕೆ ಮುಖ್ಯ ಕಾರಣ ಮಂತ್ರ, ತಂತ್ರ ಮಾಡಿ ಜೀವನ ಸಾಗಿಸುವ ಕೆಲವು ವರ್ಗದವು. ಈ ಬಗ್ಗೆ ನನ್ನದೊಂದು ಅನಿಸಿಕೆನ ನಿಮ್ಮ ಗಮನಕ್ಕೆತರ್‌ತ್ತೊಳೆ. ಪ್ರತಿಯೊಬ್ಬರ್ ನೀತಿ, ನಡ್‌ತೆ, ಭಯಾ-ಭಕ್ತಿ, ದಾನ-ಧರ್ಮದಿಂದ ತನಗೆ ಸಾಧ್ಯವಾದಷ್ಟ್ ಮಟ್ಟಿಗೆ ನಡ್ಸ್‌ಕಂಡ್ ಹೋಗಿ ಜೊತೆಗೆ ನೀವು ದಿನ ನಿತ್ಯ ನಿಮ್ಮ ಮನೆಲಿ ನೆಲ್ಲಕ್ಕಿ ದೀಪ ಮಡ್‌ಗಿ, ಒಂದು ಊದುಕಡ್ಡಿ ಹೊತ್ತಿಸಿ, ಒಂದಿಷ್ಟ್ ಅರಸಿನ ಕುಂಕುಮ, ವಿಭೂತಿ ಇದರ್ಲಿ ನಿಮ್ಗೆ ಇಷ್ಟ ಇರುದನ್ನ, ನಮ್ಮ ಇಷ್ಟ ದೇವರ್‌ನ ಗ್ಯಾನ ಮಾಡಿಕಂಡ್ ಹಣೆಗೆ ಹಚ್ಚಿಕಣ್ಣೆ ಎಲ್ಲವು ಸರಿಯಾದೆ. ಕೆಲವೊಂದು ಸಲ ಸಣ್ಣ ಪುಟ್ಟ ತೊಂದರೆ ಆಗ್‌ತಿದ್ದದೆ. ಅದ್ ನಮ್ಮ ಹಿಂದಿನ ಜನ್ಮದ ಪಾಪ ಕರ್ಮಗಳ ಮ್ಯಾಲೆ ಹೊಂದಿಕಂಡಿದ್ದದೆ. ಅದರ ಬಾದೆನ ಸ್ವಲ್ಪ ಕಮ್ಮಿ ಮಾಡಿಕ್ಕಾಗಿ ಪೂಜೆ ಪುರಸ್ಕಾರ ಮಾಡ್ದು. ಅದ್‌ರ್‌ಂದ ನಾವೆಲ್ಲವು ನಮ್ಮ ಅರೆಭಾಷೆ ಅಕಾಡೆಮಿನ ಅವರವರ ಪದ್ಧತಿನ ತಿಳಿಸಿ ಕೊಟ್ಟರೆ ಎಲ್ಲಾ ಕುಟುಂಬಲಿ ಸಹ ಒಂದೆ ತರದ ಕಾರ್ಯಕ್ರಮ ಮಾಡಿಕಂಡ್ ಹೋಕ್.

ಈಗ ನೋಡಿ ನಮ್ಮ ಮನೆಲಿ ನಮ್ಮ ಕುಟುಂಬಸ್ಥರ್ ಸೇರಿ ಭೂಮಿ ಚಾಮುಂಡಿಗೆ ಕೊಡುವ ಪದ್ಧತಿ. ಇದ್ ಕಾರ್ತಿಂಗಳಲಿ ಆಕುತ್ತೇಳಿ ನಿಯಮ. ಇಲ್ಲಿ ಪ್ರತಿ ವರ್ಷ, ವರ್ಷಕ್ಕೊಮ್ಮೆ ಚಾಮುಂಡಿಗೆ ಮಾತ್ರ ಕೊಟ್ಟೇ ಕೊಡೊಕು. ನಮ್ಮ ಕುಟುಂಬಲಿ ದೆವ್ವದ ಕೋಲ ಮತ್ತೆ ಚಾಮುಂಡಿ ಕೋಲ ಇಲ್ಲೆ. ಆದರೆ ಚಾಮುಂಡಿಗೆ ಕೊಡ್ದು ಮಲೆಯನಿಂದಲೆ, ನಾವು ಕೆಲವು ಸಲ ದೆವ್ವಗಳಿಗೆ ಕೊಡುವ ದಿನದಂದ್ ಹಗಲ್ ಹೊತ್ತಿಗೆ ಚಾಮುಂಡಿಗೆ ಕೊಟ್ಟವೆ. ಅಂದರೆ ಚಾಮುಂಡಿಗೆ ಮತ್ತೆ ದೆವ್ವಗಳಿಗೆ ಒಟ್ಟಿಗೆ ಗೊನೆ ಕಡ್ದವೆ.

ಚಾಮುಂಡಿಗೆ ಕೊಡುವ ದಿನ ಬೆಳ್ಳಿಗ್ಗೆ ಮಲಿಯ ಬಂದದೆ, ಕೈಯಾಲೆಲಿ ಕುಟುಂಬದವರ ಆಶೀರ್ವಾದ ಪಡ್ದ್ ತಟ್ಟ್‌ಕೂಡ್ಸಿದೆ. ಅದೆ ಸಮಯಲಿ ಬಾಡೆಲಿ ಮತ್ತೆ ಕೈಯಾಲೆಲಿ ಎರಡ್ ನೆಲ್ಲಕ್ಕಿ ದೀಪಗಳ್ನ ಹೊತ್ತಿಸುವೆ. ಹೊರಗಿನ ನೆಲ್ಲಕ್ಕಿ ಚಾಮುಂಡಿಗೆ ಸಂಬಂಧಪಟ್ಟದ್. ಸಂಬಂದಪಟ್ಟ ಬಾಡೆಲಿ ಇರುವ ನೆಲ್ಲಕ್ಕಿ ಸ್ವಾಮಿಗೆ ಸಂಬಂದಪಟ್ಟದ್. ಕುಟುಂಬಸ್ಥರ ಪೂಜಾರಿ ಅಟ್ಟಕ್ಕೆ ಬತ್ತಿದೀಪದ ಬೆಳ್‌ಕಲಿ ಅಟ್ಟಕ್ಕೆ ಹೋಗಿ ಕಟ್ಟಿದಂತ ಗೊನೆನ ಬಿಚ್ಚಿ ತಂದ್ ತಟ್ಟ್‌ಕೂಡ್ಸಿದಲ್ಲಿ ಇಟ್ಟವೆ. ಅಲ್ಲಿ ಗಣಪತಿಗೆ ಮಡಗಿದ್ದವೆ. ಬಾಳೆಗೊನೆ ಬಿಚ್ಚ್‌ಕಂಡ್ ಬಾಕಾಕನ ಚಾಮುಂಡಿಗೆ ಸಂಬಂಧಪಟ್ಟ ಆಯುಧಗಳ್ನ ಒಟ್ಟಿಗೆ ತಂದವೆ. ತಟ್ಟ್ ಮೇಲೆ ಈ ಆಯುಧಗಳ್ನ ತೊಳ್ದ್ ಗಂಧ, ಹೂ ಇಟ್ಟ್ ಇಟ್ಟವೆ. ಮಲಿಯ ಪೂಜೆ ಮಾಡ್ದೆ, ಕುಟುಂಬಸ್ಥರ್ ಪದ್ಧತಿ ಪ್ರಕಾರ ಒಂದೆರೆಡ್ ಮಾತ್‌ಗಳ್ನ ಹೇಳಿಕಂಡವೆ. ಗಂಡ್‌ಜನ ತಟ್ಟೆಗೆ ಅಕ್ಕಿ ಹಾಕುವೆ. ಊರವು ನೆಂಟರ್ ಸಹ ಇದ್ದವೆ. ಅವೆಲ್ಲವು ಅಕ್ಕಿ ಹಾಕಿ ಕೈ ಮುಗ್ದವೆ. ಮಲಿಯ ತಟ್ಟ್‌ನ ತಲೆಮ್ಯಾಲೆ ಹೊತ್ತ್ ಕಂಡ್ ಚಾಮುಂಡಿ ನೆಲೆಗೆ ಹೊರಟದೆ. ಆ ಸಮಯಲಿ ಅಲ್ಲಿದ್ದ ಹೆಣ್‌ಜನ ತಟ್ಟೆಗೆ ಅಕ್ಕಿ ಹಾಕುವೆ. ಕುಟುಂಬಸ್ಥರ್ ಊರವು ಅವರವರ ಕೋಳಿ ಅಥವಾ ಹಂದಿ ಇದ್ದರೆ ಹಂದಿ (ಹಂದಿ ಖಡ್ಡಾಯವಾಗಿ ಇಲ್ಲೆ) ಹರಿಕೆ ಇದ್ದರೆ ಮಾತ್ರ ಹಂದಿ ಕುಯಿಸುವುದು. ಚಾಮುಂಡಿ ನೆಲೆಲಿ ನಾವು ಒಂದು ಕಟ್ಟಡ ಮಾಡಿ ಅದರೊಳಗಡೆ ಚಾಮುಂಡೇಶ್ವರಿನ ಪ್ರತಿಸ್ಥಾಪನೆ ಮಾಡಿಯೊಳೊ. ಅದರ ಹೊರ ಬದಿಲಿ ದೇವಸ್ಥಾನದ ಬಲ ಬಾಗಲಿ ದುರ್ಗಿಸ್ಥಾನ ಉಟ್ಟು. ಅಲ್ಲಿ ಹಂದಿ ಕೋಳಿನ ಕೊಯ್ದು ಮಲಿಯ ತಟ್ಟ್ ತಕಂಡ್‌ಬಂದ್ ಗುಡಿಯ ಮುಂದೆ ಇಟ್ಟದೆ. ಅಲ್ಲಿ ಹಣ್‌ಕಾಯಿ ಮಾಡಿ ಆದಮ್ಯಾಲೆ ಕುಟುಂಬಸ್ಥರ್ ಒಂದೆರೆಡ್‌ಮಾತ್ ಹೇಳಿಕಂಡ್ ಕುಟುಂಬಸ್ಥರಿಗೂ ಊರಿನವುಕ್ಕು ಬಂದ್ ಬಳಗದವುಕ್ಕೂ ಆರೋಗ್ಯ ಭಾಗ್ಯ ಕೊಟ್ಟ್ ಕಾಪಾಡ್‌ತ ಬೇಡಿಕಂಡವೆ. ಆದಾದ ಮ್ಯಾಲೆ ಭಕ್ತರ್ ತಂದ

ಹಣ್‌ಕಾಯಿಗಳ್ನ ಅವುಕೆ ಕೊಟ್ಟವೆ. ಹಂಗೆನೆ ಭಕ್ತರ ಕುಯ್ಸಿಸಿದ ಕೋಳಿನ ಅವುಕವುಕೆ ಕೊಟ್ಟವೆ. ಮಲಿಯಂಗೆ ಕೋಳಿ ತಲೆ, ಮತ್ತೆ ಹಂದಿ ಇದ್ದರೆ ಒಂದು ಹಂದಿ ತಲೆ ಮಾತ್ರ. ಕುಟುಂಬದ ಕೋಳಿ ಮತ್ತೆ ಬ್ಯಾರೆ ಬ್ಯಾರೆ ಕುಯ್ಸಿಸಿದ ಉಳಿದಂಗೆ ಹಂದಿ ತಲೆ ಹೆಚ್ಚಿಗೆ ಇದ್ದರೆ ಅದನ್ನ ಹರಾಜಿ ಹಾಕಿ ಆ ದುಡ್ಡುನ ಖರ್ಚಿಗೆ ಉಪಯೋಗಿಸಿಕಂಡವೆ. ನಂತರ ಗುಡಿಂದ ಸ್ವಲ್ಪ ಮುಂದೆ ಬಂದ್ ಎಲ್ಲವು ಪ್ರಸಾದನ ಹಂಚಿ ತಿಂದವೆ. ಸ್ವಲ್ಪ ಮನೆಗು ತಕೊಂಡೊದವೆ. ಪ್ರಸಾದತ್ತೇಳಿರೆ ಹೊದುರಿ, ಬಾಳೆಹಣ್ಣ್, ತೆಂಗಿನ ಕಾಯಿ ಚೂರ್ ಮತ್ತೆ ಹೊರ್ದಕ್ಕಿ ಇಲ್ಲಿಗೆ ಚಾಮುಂಡಿಗೆ ಕೊಡುವ ಕಾರ್‌ಬಾರ್ ಮುಗ್‌ದದೆ. ಮತ್ತೆ ಮಲಿಯ ಬಂದ್ ನರ್‌ಪೂದನ ಸ್ಥಾನಕ್ಕೆ ಕುಟುಂಬಸ್ಥರ್‌ನ ಕರ್‌ಕಂಡ್ ಹೋಗಿ ಅಲ್ಲಿ ತಟ್ಟ್‌ಕೂಡಿಸಿ, ಕೋಳಿ ಕುಯ್ದ್, ಒಂದೆರೆಡ್ ಮಾತ್ ಹೇಳಿಕಂಡ್ ಆರೋಗ್ಯಭಾಗ್ಯ ಕೊಡೊಕುತ್ತೇಳಿ ಬೇಡಿಕಂಡವೆ (ನರ್‌ಪೂದತ್ತೇಳಿರೆ ಹುಲಿ ದೆವ್ವ).

## ಕಾರಣಕೆ ಹಾಕುವ ಪದ್ಧತಿ:-

ನಾನ್ ಈ ಹಿಂದೆ ಹೇಳ್ದಂಗೆ ಒಂದೊಂದು ಮನೆಲಿ ಒಂದೊಂದು ಪದ್ಧತಿ, ಒಂದೊಂದು ಊರ್‌ಲಿ ಒಂದೊಂದು ಪದ್ಧತಿ ಉಟ್ಟು. ಇದನ್ನೆಲ್ಲಾ ನಮ್ಮ ಅರೆಭಾಷೆ ಅಕಾಡೆಮಿಯವು ಪರಿಶೀಲನೆ ಮಾಡಿ ಸಾಧ್ಯವಾದರೆ ಒಂದೆ ರೀತಿ ಕ್ರಮ ಮಾಡಿಕಣಕ್. ಈಗ ನಮ್ಮ ಮನೆಲಿ ಕಾರಣಕೆ ಹಾಕುವ ಪದ್ಧತಿ.

## ಕಾರಣಕೆ ಹಾಕುದರಲಿ ಬಹಳಷ್ಟು ಪದ್ಧತಿ ಉಟ್ಟು.

1. ದೆವ್ವಗಳಿಗೆ ಕೊಟ್ಟ್ ಆದಮ್ಯಾಲೆ ಕಾರಣಕೆ ಹಾಕುದು;-

ದೊಡ್ಡ ಮನೆಲಿರುವ ಅಡುಗೆಮನೆ ಅಥವಾ ಉಂಬೊಳಗೆ ಇದರ್‌ಂದ ಅಟ್ಟಕ್ಕೆ ಹತ್ತಿಕೆ ಒಂದು ಏಣಿ ಇದ್ದದೆ. ಈ ಏಣಿ ಬುಡಲಿ ಕಾರಣಕೆ ಹಾಕುವ ಮಣೆನ ಇಟ್ಟವೆ. ಈ ಮಣೆನ ಎರಡ್

ತಟ್ಟಾಗಿ ಮಾಡಿದ್ದವೆ. ಮ್ಯಾಲೆನ ತಟ್ಟ್ ಗಂಡಸರಿಗೆ ಸಂಬಂಧಪಟ್ಟದೆ. ಎರಡನೆ ತಟ್ಟ್ ಕೆಳಗೆದ್ದ್ ಹೆಣ್ಣ್ ಜನರಿಗೆ ಸಂಬಂಧಪಟ್ಟದೆ. ಈ ಮಣೆನ ಬಲ ಭಾಗಲಿ ಒಂದು ಕಾಲು ದೀಪ ಹೊತ್ತಿಸಿ ಇಟ್ಟವೆ. ಅಲ್ಲಿ ಒಂದು ಮುಕ್ಕಾಲ್‌ಮ್ಯಾಲೆ ಕೋಲೆರೂಪು (ಚಿನ್ನದ ಕೋಲೆರೂಪು) ಇದನ್ನ ಒಂದು ಕೆಂಪು ಬಟ್ಟೆ ಮ್ಯಾಲೆ ಇಟ್ಟವೆ. ಪೂಜಾರಿಗೆ ಒಂದೆರೆಡ್ ಕಡೆಬಾಳೆಲೆ ಮತ್ತೆ ಕೊಡಿಬಾಳೆಲೆನೆ ತೊಳ್ದ್‌ತಂದ್ ಕೊಟ್ಟವೆ. ಪೂಜಾರಿ ಬಿಳಿಪಂಚೆ ಉಟ್‌ಕಂಡ್ ಒಂದು ಚೊಂಬುನೀರ್‌ನ ಬಾವಿಂದ ತಕಂಡ್ ಒಟ್ಟಿಗೆ ಎರಡ್ ಕುಪ್ಪಿ ಗ್ಲಾಸ್ ಹಿಡ್‌ಕಂಡ್ ಬಂದವೆ. ಕಡೆಬಾಳಲೆಗೆ ನೀರ್ ಹಾಕಿ ಆದಮ್ಯಾಲೆ ಹದಿನಾರ್ ಕೀಂತ್‌ಗಳ್ನ ಮಾಡಿ ಗಂಡಸರಿಗೆ ಕಾರಣಕ್ಕೆ ಹಾಕುವ ಮಣೆತಟ್ಟ್‌ಲಿ ಸಾಲಾಗಿ ಇಟ್ಟವೆ. ಹಂಗೆನೆ ಹೆಂಗಸರಿಗೆ ಕಾರಣಕ್ಕೆ ಹಾಕುವ ತಟ್ಟ್‌ಲಿ ಸಾಲಾಗಿ ಇಟ್ಟವೆ. ಇದರ ಎದುರಿಗೆ ಒಂದು ಕೊಡಿಬಾಳಲೆಲಿ ಕಾರಣಕ್ಕೆತ್ತೇಳಿ ಮಾಡಿ ತಂದ ಅಡುಗೆನ ಬೇಕಾದಷ್ಟು ಮಾತ್ರ ಹಾಕಂಡವೆ. ದೆವ್ವಗಳಿಗೆ ಎಡೆ ಇಕ್ಕಿದಂತಹ ಎಡೆಲಿ ಒಂದೆಡೆನ ಮಾತ್ರ. ಹರಿಸೇವೆಲಿ ಎಡೆ ಇಕ್ಕಿದ ಒಂದೆಡೆನ ಸಹ ಇದೆ ರೀತಿಲಿ ಕಾರಣಕ್ಕೆ ಹಾಕುವೆ. ಆ ಬಾಳಲೆ ಇನ್ನೊಂದು ಬದಿಲಿ ಗೈಪು ಮಾಡಿ ತಂದ್ ಕೋಳಿ ಮಾಂಸ ಕರಿಯಡ ಬಟಕಾಯಿಗಳನ್ನು ಹಾಕಂಡವೆ. ಅದನ್ನ ಬ್ಯಾರೆ ಬ್ಯಾರೆ ಸಣ್ಣ ಸಣ್ಣ ಚೂರು ಮಾಡಿ ಕಟ್ಟಿ ಇಟ್ಟವೆ. ಕಾರಣನ ನೆನೆಸಿಕಂಡ್ ಸುರೂಗೆ ಗಂಡಸರ ಬಾಳೆಲೆಗೆ ಅಡುಗೆ ಮಾಡಿ ತಂದ್ ಕಲ್ಲಿಟ್ಟ ಮುದ್ದೆಂದ ಒಂದೊಂದು ಚೂರು ತೆಗ್ದ್ ಹಾಕುತ್ತ ಬಂದವೆ. ಹಂಗೆನೆ ಹೆಂಗಸರ ಬಾಳೆಲೆಕೀಂತ್‌ಗಳ ಮ್ಯಾಲೆ ಇಕ್ಕಿವೆ. ಇದಾದ ಮ್ಯಾಲೆ ಕಲ್ಲಿಟ್ಟ ಸಾರ್ ಕರಿಯಡ, ಬಟ್ಟಕಾಯಿ, ಮಾಂಸ ಸೇರಿಸಿ ಇಟ್ಟ್ ಮುದ್ದೆಂದ ಒಂದೊಂದು ಚೂರ್ ತೆಗ್ದ್ ಎಲ್ಲ ಬಾಳೆಲೆಕೀಂತ್‌ಗಳ ಮ್ಯಾಲೆ ಇಕ್ಕಿಕಂಡ್ ಬಂದವೆ. ಮತ್ತೆ ಗಂಡಸರಿಗೆ ಎಡೆ ಇಕ್ಕಿದ ತಟ್ಟೆಲಿ ಒಂದ್ ಗ್ಲಾಸ್ ನೀರ್ ಇಟ್ಟವೆ. ಇನ್ನೊಂದು ಗ್ಲಾಸ್‌ಲಿ ಕಳ್,

ಬ್ರಾಂದಿ, ಮತ್ತೆ ಯಾರಾದರ್ ತಂದದರ್ನ ಅಥವಾ ಕುಟುಂಬಸ್ಥರ್ ಸೇರಿ ಕೊಟ್ಟದರ್ನ ಒಂದು ಗ್ಲಾಸ್‌ಲಿ ಇಟ್ಟವೆ. ಒಂದ್ ಬಾಳೆಲೆ ಕೀಂತ್‌ಲಿ ಸುರ್‌ಗೆ ಎಲ್ಲಾ ಎಡೆಗಳ ಕೀಂತ್‌ಗಳಿಗೆ ನೀರುಬೇಳ್ವಂಗೆ ನೀರ್ ಹಾಕುವೆ. ಮತ್ತೆ ಕಳ್ಳ್ (ಬ್ರಾಂದಿ) ಸಹ ಅದೇ ರೀತಿ ಹಾಕಿವೆ. ಮತ್ತೆ ಕುಟುಂಬಸ್ಥರನ್ನೆಲ್ಲಾ ಕರ್ದವೆ. ಬಂಧು ಬಳಗದವರ್ನ ಕರ್ದವೆ, ಎಲ್ಲವರ ಕೈಗೆ ಅಕ್ಕಿ ಕೊಟ್ಟವೆ. ಊದುಬತ್ತಿ ಹೊಗೆನ ಎಡೆಗೆ ಹಾಕುವೆ. ಪೂಜಾರಿ ಒಂದೆರಡ್ ಮಾತ್‌ಗಳ್ನ ಹೇಳಿ ಕಂಡದೆ. ಕ್ರಮ: ಅಲ್ಲಿ ಕೂಡಿದ್ದವರ ಪೈಕಿ ಒಂದೆರಡು ಹಿರಿಯವರ ಹೆಸರೇಳಿ ಮತ್ತೆ ನಮ್ಮ ನೂರಾರ್ ಕುಟುಂಬದ ಮುಂದೆ ಹೇಳಿಕೊಂಬದು ಏನ್‌ತ್ತೇಳಿರೆ ಈ ಕಾರಣಕ್ಕೆ ಇಕ್ಕಿದ ಉದ್ದೇಶಕ್ಕಾಗಿ ಮಾಡಿದಂತ ಅಡುಗೆನ ನಾನ್ ಇಲ್ಲಿ ಎಡೆ ಇಕ್ಕೊಳೆ. ಈ ಮಾಡ್ದಂತ ಅಡುಗೆಲಾಗಲಿ, ಮಿಯ್ದ್‌ಉಟ್ಟ ಮಡಿಲಾಗಲಿ, ಇಕ್ಕಿದಂತ ಎಡೆಲಾಗಲಿ, ಅನೇಕ ಶಾಸ್ತ್ರ ತಪ್ಪ್‌ಗ ಇದ್ದರೆ. ನಾನ್ ಇಲ್ಲಿ ನಂಗೆ ತಿಳಿದಷ್ಟ್ ಮಟ್ಟಿಗೆ ಅನುಸರಿಸಿಕಂಡ್ ಎಡೆ ಇಕ್ಯೊಳೆ. ಇಕ್ಕಿದ ಎಡೆಲಿ ಏನಾರ್ ತಪ್ಪಿದ್ದರೆ ಇದರ್ನ ಒಪ್ಪುಮಾಡಿ, ಈ ಇಕ್ಕಿದಂತ ಎಡೆ ಸ್ವೀಕರಿಸಿಕಂಡ್ ನಮ್ಮ ಈ ನೂರಾರ್ ಕುಟುಂಬಸ್ಥರಿಗೂ, ಮಕ್ಕಮರಿಗಳಿಗೂ, ಹೋದಲ್ಲಿ, ಬಂದಲ್ಲಿ, ದನಕರ್, ಬಿತ್ತಿದಬೆಳೆಗೂ ಯಾವುದೊಂದು ತೊಂದರೆ ಕೊಡದೆ ರಕ್ಷಣೆ ಮಾಡಕುತ್ತೇಳಿ ನಮ್ಮ ಗುರುಕಾರಣರವರನ್ನ ಮತ್ತೆ ಕೊಟ್ಟು ಕೊಂಡಾಡುವ ದೆವ್ವ-ದೇವರುಗಳ್ನ ನಮ್ಮ ಕುಲ ದೇವರಾದ ವೆಂಕಟ್ರಮಣಸ್ವಾಮಿನ ಮತ್ತೆ ಊರುದೇವತೆಗಳ್ನ ಚಾಮುಂಡೇಶ್ವರಿ ದೇವಿನ ಬೇಡಿಕೊಂಡವೆತ್ತೇಳಿ ಇಕ್ಕಿದಂತ ಎಡೆಗೆ ಎಲ್ಲವು ಅಕ್ಕಿ ಹಾಕಿ ಆದಮ್ಯಾಲೆ ಒಂದು ನಿಮಿಷ ತಿರುಗಿ ನಿಂತವೆ. ಮತ್ತೆ ಕೆಮ್ಮಿಕಂಡ್ ತಿರುಗಿ ಎಲ್ಲವು ಎಡೆ ಎದುರಿಗೆ ಅಡ್ಡಬಿದ್ದ್ ಕೈಮುಗ್ದವೆ. ಎಲ್ಲಾ ಹಿರಿಯವರ ಕಾಲುಗಳ್ನ ಕಿರಿಯವು ಹಿಡ್‌ದ್ ಆಶೀರ್ವಾದ ಪಡಕಂಡವೆ.

ಇಲ್ಲಿ ಕಾಲುಹಿಡ್ದ್ ಆಶೀರ್ವಾದ ಬೇಡುವ ಉದ್ದೇಶಂತೇ

ಳಿರೆ ನಮ್ಮ ನಮ್ಮೊಳಗೆ ಏನೇ ಕ್ಲೇಶ ಇದ್ದರೆ ಆಶೀರ್ವಾದ ಬೇಡ್‌ಕಾಕನ ಹಿರಿಯವು ಆರ್ಶಿವಾದ ಮಾಡೇ ಮಾಡಕು. ಮಾಡದಿದ್ದರೆ, ಆ ದೋಷ ಅವಂಗೆ ಅಥವಾ ಅವಳಿಗೆ. ಆದರ್‌ಂದ ಇದ್ ಕಡ್ಡಾಯ.

ಇಲ್ಲಿ ಇನ್ನೊಂದು ಪ್ರಶ್ನೆ ನಿಮ್ಮ ಕುಟುಂಬದಲ್ಲಿ ಯಾಕೆ ಕಾರಣಕೆ ಹಾಕ್‌ಕಾಕನ ಗಂಡ್ ಜನರಿಗೆ ಹದಿನಾರ್ ಬಾಳೆಲೆಕೀಂತ್, ಮತ್ತೆ ಹೆಣ್ಣ್ ಜನರಿಗೆ 16 ಬಾಳೆಲೆಕೀಂತ್ ಇದ್ದ್, ಇದ್ ಕೇವಲ ಹದಿನಾರಕ್ಕೆ ಸೇರ್‌ಸ್‌ಕಾಕಾನ ಮಾತ್ರತ್ತೇಳಿವೆ. ನಮ್ಮ ಕುಟುಂಬದ ನಡ್ಪು ಹಿಂದೆ ಇತ್. ಇಂದ್ ಉಟ್ಟು ಇನ್ ಮುಂದೆ ಸಹ ನಡ್ಸ್‌ಕಂಡ್ ಹೋದವೆ. ಅಂತು ಹಿರಿಯವು ಅಂದರೆ, ನನ್ನ ಅಪ್ಪ, ಚಾಂಪ, ಮುತ್ತಾತಂಗ ಹಿಂದೆಂದ ನಡ್ಸಿಕಂಡ್ ಬರುತ್ತಿದ್ದದನ್ನು ನಂಗೆ ತಿಳಿದಷ್ಟು ನಿಮ್ಮ ಮುಂದೆ ಹೇಳಿನೆ. ಕಾರಣ ಹದಿನಾರುತ್ತೇಳ್ದು ಯಾಗಲೂ ಸ್ಥಿರವಾಗಿ ಇದ್ದದೆತ್ತೇಳುವ ಭಾವನೆ.

ನಮ್ಮಲ್ಲಿ ಅಂದಂದ್ ಇಂದ್‌ಮುಟ್ಟ ಹಂಗೆನೆ ಇನ್ನೂ ಮುಂದಕ್ಕೂ ನಡೆಯುವ ಒಂದು ಆಧಾರ ಇಲ್ಲದೆ ನಡ್‌ಸಿಕೊಂಡು ಬರುವ ವಿಚಾರತ್ತೇಳಿರೆ ಸೂತ್‌ಗ. ಈ ಸೂತ್‌ಗನ ಹಿಂಗೆ ಹೇಳುವೆ. ಹೆತ್ತ ಸೂತ್‌ಗ ಹತ್ತ್‌ದಿನ, ಸತ್ತ ಸೂತ್‌ಗ ಹದಿನಾರ್ ದಿನ, ಋಣವೆಂಬ ಸೂತ್‌ಗ ಜನ್ಮ ಜನ್ಮಾಂತರಕ್ಕೂ ನಮ್ಮ ಕಾರಣವು ತ್ತೇಳಿರೆ ದಿವಂಗತರಾದವು, ಗುರುತ್ತೇಳಿರೆ ಈ ನೆಲೆನ ಸುರ್‌ಲಿ ಸ್ಥಾಪನೆ ಮಾಡ್ದವು. ಇವು ಅವರ ಕಾಲದ ಪದ್ಧತಿಯಂಗೆ ಸತ್ತ್ ಹದಿನಾರನೆ ದಿನ ಹದಿನಾರಕ್ಕೆ ಸೇರುಸುದು. ಅಂದರೆ ಸತ್ತವನ ಅಥವಾ ಸತ್ತವಳ ಆತ್ಮ ಹದಿನಾರು ದಿನಗಳವರೆಗೆ ದಿಕ್ಕ್‌ದೆಸೆ ಇಲ್ದಂಗೆ ಅಲ್ಲಲ್ಲಿ ಸುತ್‌ತಿದ್ದವೆ. ಆ ಹದಿನಾರನೇ ದಿನ ಹಿಂದೆ ಸತ್ತವರೊಟ್ಟಿಗೆ ಇಲ್ಲಿ ತೀರಿಕೊಂಡವರ್ನ ಹದಿನಾರಕ್ಕೆ ಸೇರಿಸುದು ಇದೆ ರೀತಿ ಎಡೆ ಬಾಳೆಲೆ ಕೀಂತ್‌ಗಳಲ್ಲಿ ಹಾಕುದು. ಆದರೆ ಒಂದು ಬಾಳೆಲೆಕೀಂತ್‌ನ ನೆಲಲಿ ಹಾಕಿ ಅದಕ್ಕೆ ಎಡೆ ಇಕ್ಕಿದ್ದವೆ. ಆದರೆ

ತೀರಿಕೊಂಡವನೊಬ್ಬ ಗಂಡಾದರೆ ಗಂಡಸರ ಸಾಲಿಂದ ಒಂದ್ ಕೀಂತ್ ತೆಗೆದ್ ನೆಲಲಿ ಇಟ್ಟ ಎಡೆನ ಅಲ್ಲಿಗೆ ಸೇರಿಸಿ ಅವರ್ನ ಹದಿನಾರಕ್ಕೆ ಸೇರಿಕಣಿತ್ತೇಳಿ ಮೂರು ಮೂರು ಸಲ ಹೇಳಿಕಂಡ್ ಅಲ್ಲಿಗೆ ಸೇರಿಸುವೆ. ಹೆಂಗಸಾದರೆ ಹೆಂಗಸ್ರ ಸಾಲಿಂದ ಒಂದು ಕೀಂತ್ ತೆಗೆದ್ ನೆಲಲಿ ಇಟ್ಟು ಎಡೆನ ಸೇರಿಸುವೆ. ಇಲ್ಲಿ ಇನ್ನೊಂದು ಮುಖ್ಯವಾದ ವಿಷಯ ಹದಿನಾರಕ್ಕೆ ಸೇರಿಸಿಕೆ ಎಡೆ ಹಾಕುದು ಪೂಜಾರಿಯಾದವನ ಕೆಲಸ. ಆದರೆ ಹದಿನಾರಕ್ಕೆ ಎಡೆಗೆ ಸೇರಿಸುದು ಕೋಳಿಕೊಂದ್ ಅಡುಗೆ ಮಾಡುದು ಕ್ರಿಯೆಗೆ ನಿಂತವ ಮಾತ್ರ

ಅಂವ ಅಥವಾ ಅವಳ್‌ನ ಸೇರಿಸಿಕಂಡ್ ನಮಗೆ ಆಶೀರ್ವಾದ ಕೋಡಿತ್ತೇಳಿ ಹಿರಿಯರಾದ ಗಂಡ್ ಮತ್ತೆ ಹೆಣ್ ಕಾರಣವುಕೆ ಎಡೆ ಹಾಕಿ ಅವರ್ನ ಸಂತೋಷ ಪಡಿಸುವ ಕ್ರಮ. ಒಂದೇ ಮಾತ್‌ಲಿ ಹೇಳುದಾದರೆ ಕಾರಣವು ಎಲ್ಲಾ ಒಟ್ಟು ಸೆರಿಕಂಡ್ ಗಂಡ ಹೆಣ್ ಅಲ್ಲಿ ಒಟ್ಟಿಗೆ ಇದ್ದವೆ. ಅದಕ್ಕಾಗಿ ಅವರನ್ನೆಲ್ಲಾ ಪ್ರತಿ ಸಲನು ಕಾರಣಕ್ಕೆ ಹಾಕ್‌ಕಾಕನ ಬೇಡಿಕೊಂಡ್ ಆಶೀರ್ವಾದ ಪಡೆಯದು. ಇದ್ ಒಂದ್ ಕ್ರಮ. ಇದ್ ಅಂದ್‌ನವರ ಭಾವನೆ ಆಗಿತ್ತ್. ಇಂದ್ ನಾವು ನಡ್ಸ್‌ಕಂಡ್ ಹೋಗುತ್ತೇಳೊ ಇನ್ ಮುಂದಕ್ಕೂ ನಡ್ಸ್‌ಕಂಡ್ ಹೋದವೆ.

ಇಲ್ಲಿ ಮುಖ್ಯವಾದ ವಿಚಾರನ ಗಮನಲಿ ಇಟ್ಟುಕೊಳ್ಳಕು. ಈ ಪದ್ಧತಿ ಕೇವಲ ಒಂದು ಕುಟುಂಬದ ಐನ್ ಮನೇಲಿ ಮಾತ್ರ ನಡೆಯುವ ಪದ್ಧತಿ. ಯಾವುದೇ ಕಾರಣಂದ ಅವರವರ ಸ್ವಂತ ಮನೆಲಿ ಗುರು ಕಾರಣಕ್ಕೆ ಎಡೆ ಹಾಕುದಾಗಲಿ ದೆವ್ವ ದೇವರುಗಳಿಗೆ ಕೊಡ್ದಾಗಲಿ ಹರಿಸೇವೆ ಮಾಡ್ದಾಗಲಿ ಇಲ್ಲೆ. ಅದ್‌ಕ್ಕಾಗಿ ಐನ್ ಮನೆನ ಉಳಿಸಿ ಬೆಳ್‌ಸಿ ದೇವಸ್ಥಾನದಂಗೆ ಇಟ್ಟ್‌ಕಂಡ್ ದಿನ ಬೆಳಿಗ್ಗೆ ಸಾಯಂಕಾಲ ಗುಡಿಸಿ ಸಗಣಿ ನೀರ್ ಹಾಕಿ ನೆಲ್ಲಕ್ಕಿ ದೀಪ ಹೊತ್ತಿಸಿ ಊದುಬತ್ತಿ ಹೊಗೆ ಹಾಕಿ ಹಂಗೆನೆ ಗುರುಕಾರಣವುಕ್ಕೆ ದೊಡ್ಡ ಮನೆ ಐಮರದ ಮ್ಯಾಲೆ ಒಂದು ಚೊಂಬು ನೀರ್

ಒಂದು ತಟ್ಟೇಲಿ ಎಲೆ ಅಡಿಕೆ ಸಾಯಂಕಾಲದ ಹೊತ್ತಿಗೆ ಇಡೊಕು ಮತ್ತೆ ನೆಲ್ಲಕ್ಕಿ ದೀಪ ಹೊತ್ತಿಸಿದಂಗೆ ಊದುಬತ್ತಿ ಕಡ್ಡಿ ಹೊತ್ತಿಸಿ ಕುಲದೇವರಾದ ವೆಂಕಟರಮಣ ಸ್ವಾಮಿ ಮತ್ತೆ ಲಕ್ಷಿ ದೇವರ ಗ್ಯಾನ ಮಾಡಿ ಶಂಖ ಊದಿ, ಜಾಗಟೆ ಹೊಡೆಯನಿ ಆ ಕುಟುಂಬದ ಬೆಳವಣಿಗೆ ನೋಡಿ. ಅದ್ ಎಂದೆಂದಿಗೂ ಮಾದರಿಯಾಗಿ ಉಳ್ದದೆ. ಇದೇ ಗೌಡ ಕುಲದ ಮೂಲ ಪದ್ಧತಿ. ಇದ್ ಉಳಿಯಲಿ.

ಸ್ವಂತವಾಗಿ ಕಾರಣಕ್ಕೆ ಹಾಕುದು ಊಟೋಪಚಾರ ಮಾಡ್ನುದು ಆ ವ್ಯಕ್ತಿಗೆ ಬಿಟ್ಟ ವಿಷಯ. ಆದರೆ ಹೊಸದ್ ಊಟಮಾಡ್‌ಕಾಕನ, ದೆವ್ವಗಳಿಗೆ ಕೊಡ್‌ಕಾಕನ, ಹರಿಸೇವೆ ಮಾಡ್ಸ್‌ಕಾಕನ ಕಾರಣಕ್ಕೆ ಹಾಕುದು ಹಂಗೆನೆ ಹುತ್ರಿ ಹಬ್ಬಲಿ ಕದಿರ್ ತಂದ್ ನಾವೆಲ್ಲಾ ಉಂಬಕ್ಕೆ ಮುಂದೆ ಕಾರಣಕ್ಕೆ ಹಾಕ್‌ಕಾಕನ ಕುಟುಂಬಸ್ಥರ್ ಸೇರಿಕಂಡ್ ಹಾಕುವೆ. ಹಂಗೆನೆ. ಕುಟುಂಬಲಿ ಗಂಡ್, ಹೆಣ್ಣ್ ಮಕ್ಕಳ ಮದುವೆ ಮಾಡ್‌ಕಾಕನ ಮದುವೆ ಮಾಡುವವನೆ ಅವರ ಸ್ವಂತವಾಗಿ ಕುಟುಂಬಸ್ಥರ್‌ನ್ನ ಕರ್‌ಕಂಡ್ ಕಾರಣವರ ಬೊಳಿಕಾಂಬ ಪದ್ದತಿ. ಇದ್ ಅಂದ್, ಇತ್ತ್, ಇಂದ್ ಉಟ್ಟು. ಐನ್ ಮನೆ ಉಳಿಸಿಕಂಡರೆ ಇನ್ ಮುಂದೆ ಉಟ್ಟು.

* * * * *

# ನೆರ್‌ದ ಮದುವೆ ಪದ್ಧತಿ

ಒಂದು ಗೂಡೆ ಮದುವೆಗೆ ತಯಾರಾಗುಟ್ಟುತ್ತೇಳುವ ಪದ್ಧತಿ ಇದ್‌ಕ್ಕೆ ನೆರ್‌ದ ಮದುವೆತ್ತೇಳುವೆ ಅಥವಾ ಹೊಲೆಕಂಡುಟು ತ್ತೇಳುವೆ–

ನಮ್ಮ ಈ ಹತ್ತ್ ಕುಟುಂಬ ಹದಿನೆಂಟ್ ಗೋತ್ರದವು ಸೇರಿಕಂಡ್ ಜೀವನ ನಡ್ಸ್‌ತಿದ್ದ ಒಂದು ಊರ್‌ಲಿ ನನ್ನ ಮಗಳ ಮದುವೆ ಆಗುವ ವಯಸ್ಸಿಗೆ ಅಂದರೆ ಪ್ರಾಯಕ್ಕೆ ಬಂದುಟು ತ್ತೇಳ್ದನ್ನ ಈ ಹತ್ತ್ ಕುಟುಂಬ ಹದಿನೆಂಟ್ ಗೋತ್ರದವುಕೆ ತಿಳಿಸುವಂತ ಪದ್ಧತಿ. ಇದನ್ನ ನೆರ್‌ದ ಮದುವೆತ್ತೇಳಿ ಕರಿತ್ತಿದ್ದೊ.

ಇಂದ್ – ನೆರ್‌ದಮದುವೆ, ಇದ್ ಒಂದ್ ಒಳ್ಳೆ ಪದ್ಧತಿಯಲ್ಲ, ಇದನ್ನ ಸಾರ್ವಜನಿಕವಾಗಿ ತಿಳಿಸುವ ಕ್ರಮ ಅರ್ಥ ಇಲ್ಲದ್‌ತ್ತೇಳಿ ಕೈ ಬಿಡ್‌ತೊಳೊ. ಆದರೆ ಈ ವಿಷಯನ ಸುಮಾರ್ ಅರ್ಧಕ್ಕಿಂತ ಹೆಚ್ಚಿನವು ಗುಟ್ಟಾಗಿ ಆಚರಿಸಿಕಂಡ್ ಬರುತ್ತಳೊ. ಕಾರಣ ಒಂದು ಗೂಡೆನ ಮುಂದಿನ ಜೀವನ ನಾಚಿಕೆ, ಮುಂದೆ ಏನೇನ್ ಆದೆ ಅಂತಾ: ಸಮಯಲಿ ಹೆಂಗೆ ಹೆಂಗೆ ನಡ್‌ಕಂಡ್ ಹೋಕು ಹಿರಿಯವುಕೆ ಯಾವ ಯಾವ ರೀತಿ ಅಥವಾ ಸಮಯಗಳಲ್ಲಿ ಗೌರವ ಕೊಡಕುತ್ತೇಳ್ದನ್ನ ಹಿರಿಯವು ಕಿರಿಯವುಕೆಲ್ಲಾ ಹೇಳಿ

ಕೊಡುವಂತ ಪದ್ದತಿಯೇ ನೆರ್‌ದಮದುವೆ.

ಇಂತಾ ತಿಳುವಳಿಕೆಗಳ್ನ ಕುಂತಿಗೆ ಮಾದ್ರಿ ಹೇಳಿಕೊಟ್ಟದೆ ತ್ತೇಳ್ದನ ಪರ್ವ ಪುಸ್ತಕಲಿ ಬರೆದಳೊ. ಇದ್ ಯಾವ ವಿಷಯಲಿ ಬಂದದೆತ್ತೇಳಿರೆ ಕುಂತಿ ಸಣ್ಣವಳಾಗಿರ್‌ಕಾಕನ ಅಂದರೆ ಮೈ ನೆರೆದ ನಂತರ ಅವಳಿಗೆ ಸಣ್ಣ ಮಕ್ಕಳೊಂದಿಗೆ ಆಟ ಆಡ್ದು ತ್ತೇಳಿರೆ ತುಂಬಾ ಕುಸಿಗಡ. ಅದ್‌ಕ್ಕಾಗಿ ಅವಳು ಪ್ರತಿಯೊಬ್ಬರೊಟ್ಟಿಗೆ ಚರ್ಚೆ ಮಾಡ್‌ತಿತ್‌ಗಡ, ಅದಕ್ಕಾಗಿ ನಂಗೆ ಒಂದು ಕೂಸು ಬೇಕು. ಈ ಕೂಸು ಮನುಷ್ಯನ ಹೊಟ್ಟೆಯೊಳಗೆ ಹೆಂಗೆ ಬಂದು ಸೇರಿಕಂಬದು ಮತ್ತೆ ಅದ್ ಹೊಟ್ಟೆಂದ ಹೆಂಗೆ ಹೊರಗೆ ಬಾದು ಇದನ್ನೆಲ್ಲಾ ತಿಳ್‌ಕಂಬ ಆಸೆ ಬಹಳ. ಅದ್ ಅಂದಲ್ಲ, ಇಂದ್‌ನ ಸಣ್ಣ ಮಕ್ಕ ಸಹ ಕೇಳುವೆ. ನಮ್ಮ ಅವ್ವನ ಹೊಟ್ಟೆಲಿ ಸಣ್ಣ ಬಾಬೆ (ಕೂಸು) ಉಟ್ಟು. ಅದ್ ಅವ್ವ ಕಾರ್‌ಕಾಕನ ಬಾಯಿಲಿ ಬಂದದೆಗಡತ್ತೇಳಿ ಸುಮ್ಮನಾದವೆ.

ಹಿಂಗೆ ಇರ್‌ಕಾಕನ ಒಂದು ದಿನ ಕುಂತಿ ಬೋಜನನ ಅಂದರೆ ರಾಜನ ಅರಮನೆಗೆ ವಶಿಷ್ಟಾಮುನಿ ಬಂದದೆ. ಅಲ್ಲಿ ಆ ಋಷಿಗೆ ಆಶ್ರಯ ಕೊಟ್ಟವೆ. ಋಷಿಗೆ ಸಣ್ಣ–ಪುಟ್ಟ ಕೆಲ್ಸ ಕಾರ್ಯಗಳನ್ನ ಮಾಡಿಕೆ ಕುಂತಿನ ಕಳ್ಸಿಕೊಟ್ಟವೆ. ವಶಿಷ್ಟ ಮುನಿ (ಋಷಿ) ಕೆಲವು ದಿನ ಕಳ್ದ್ ಅಲ್ಲಿಂದ ಹೊರಡಿಕೆ ಸಿದ್ದನಾದೆ. ಆ ಸಮಯಲಿ ಕುಂತಿ ಕೇಳ್ದಿಗಡ ನೀವು ಹೋದರೆ ನನ್ನೊಟ್ಟಿಗೆ ಆಡಿಕೆ ಒಂದು ಕೂಸು ಬೇಕು. ಆ ಕೂಸು ಹೆಂಗಸ್ಸಿನ ಹೊಟ್ಟೇಲಿ ಹೆಂಗೆ ಬಂದದೆತ್ತೇಳಿ ವಶಿಷ್ಟ ಇಕ್ಕಟ್ಟಿಗೆ ಸಿಕ್ಕಿ ಹಾಕಂಡ್ ಹೇಳ್ದಿಗಡ ನಾನ್ ಇನ್ ಸ್ವಲ್ಪ ದಿನ ಇಲ್ಲಿ ಇದ್ದ್ ಮತ್ತೆ ಹೋನೆತ್ತೇಳಿ ಹಂಗೆನೆ ಸ್ವಲ್ಪ ದಿನ ಋಷಿ ಅಲ್ಲೆ ಇರ್‌ಕಾಕನ ಕುಂತಿ ಇದ್ದಕ್ಕಿದ್ದಂಗೆ ಕಾರುದು (ವಾಂತಿ ಮಾಡ್ಕಂಬದು) ಸುರಾತ್‌ಗಡ. ಆಗ ಋಷಿ ಹೇಳ್ದೆ ನಿಂಗೆ ಸದ್ಯಲಿ ನಿನ್ನೊಟ್ಟಿಗೆ ಆಡುವಂತ ಮಗು (ಕೂಸು) ಸಿಕ್ಕಿದೆ ನಾನ್ ಇನ್ ಹೊರ್ಟ್ ಹೋನೆತ್ತೇಳಿ ಅಲ್ಲಿಂದ ಹೋದೆ.

ಈ ವಿಷಯ ಕುಂತಿಯ ಸಖಿಗೆ ಗೊತ್ತಿತ್ ಆದರೆ ಹೇಳಿಕೆ ಹೆದರಿಕೆ. ಸ್ವಲ್ಪ ಸಮಯ ಕಳ್ದಂಗೆ ಆ ಕೂಸು ಹೊರಗೆ ಬಾತ್ (ಕಾನನಿ) ಈಗ ರಾಜಂಗೆ ಸುದ್ದಿ ಮುಟ್ಸದೆ ವಿಧಿ ಇಲ್ಲೆ. ಅದೊಂದು ದಿನ ಸುರ್ಯೋದಯ ಸಮಯ ಹೊಳೆಯ ಬದಿಲಿ ಕುಂತಿಗೆ ಗಂಡ್ ಕೂಸು ಆತ್ ಅವನೆ ಕರ್ಣ. ಈ ಕೂಸುನ ಸುರ್‌ಲಿ ಬೆಸ್ತರ ಕೈಗೆ ಕೊಟ್ಟಿದ್ದವೆ. ಮತ್ತೆ ಅಂದ್‌ನ ಪದ್ಧತಿ ಪ್ರಕಾರ ಅವರ ವಂಶದವು ಹೆತ್ತ್ ಕೊಟ್ಟ ಕೂಸುತ್ತೇಳಿ ಪ್ರಚಾರ ಮಾಡಿ ಆ ಕೂಸ್‌ನ ತಕ್ಕಂಡ್ ಸಾಕುವೆ. ಅದ್ ಅಂದ್‌ನ ಕಾಲಕ್ಕೆ ಸರಿ. ಇಂದ್‌ನ ಕಾಲಕ್ಕೆ ಪ್ರನಾಳ ಶಿಶು ಅಥವಾ ದತ್ತು ಕೂಸುತ್ತೇಳಿ ಸಾಕುತ್ತೊಳೊ. ಮುಂದೆ ಒಂದು ಕೂಸಿಗೆ ಆಧಾರ ಅವ್ವನೇ ಹೊರತ್ ಅಪ್ಪ ಆದುಲೆ. ಕಾರಣ ಕುಂತಿ ಪುತ್ರರುತ್ತೇಳ್ದಂಗೆ ಅಂದರೆ ವಿಷಯನ ಯಾಕೆ ಇಲ್ಲಿ ಸೇರಿಸಿ ತಿಳ್ಸುದುತ್ತೇಳಿರೆ ಅಂದ್‌ಂದ ನೆಡ್‌ಕಂಡ್ ಬಂದಂತ ನೆಡ್‌ಪು, ಆಚಾರ-ವಿಚಾರಗಳ್ನ ಅವರವರ ಮಕ್ಕಳ, ಮೊಮ್ಮಕ್ಕಳ ಮಕ್ಕಳಿಗೆ ಹಿರಿಯವು ತಿಳ್ಸಿಕೊಡೊಕು. ಇದ್ ಯಾವುದೇ ಕಾರಣಕ್ಕೆ ಮೂಢ ನಂಬಿಕೆ ಅಲ್ಲ. ಇದನ್ನ ತಿಳಿದಂತ ಹಿರಿಯವು ಅವರವರ ಸಂಸ್ಕೃತಿನ ಬೆಳ್ಸಕು. ಇದ್ ಬರಿ ಗೌಡ ಜನಾಂಗಕ್ಕೆ ಮಾತ್ರ ಸಂಬಂಧಪಟ್ಟಿದ್ದಲ್ಲ. ಮನುಷ್ಯ ಜೀವಿಗಳಾದ ನಾವೆಲ್ಲಾ ಪಾಲಿಸಿಕಂಡ್ ಬರೋಕು. ಆದರೆ ಇನ್ ಮುಂದೆನು ಉಳ್ಸಿಕಂಡ್ ಹೋದ್ ಒಳ್ಳೆದ್. ಅಂದರೆ ಒಂದು ಕುಟುಂಬದ ಉದ್ಧಾರ ಅಮ್ಮನಿಂದ ಮಾತ್ರ ಸಾಧ್ಯ, ಅಪ್ಪ ವಂಶಕ್ಕೆ ಆಧಾರ ಮಾತ್ರ. ಒಂದೇ ಮಾತ್‌ಲಿ ಹೇಳ್ದುದಾದರೆ ಅಪ್ಪತ್ತೇಳ್ದು ವಂಶದ ಗುರುತಿನ ಚೀಟಿ ಮಾತ್ರ.

* * * * *

# ಮದುವೆ ಪದ್ದತಿ

**ಅಂದ್ :-**

ಒಂದು ಹೈದ ಒಂದು ಗೂಡೆನ ಮದುವೆ ಆದುತ್ತೇಳಿರೆ :_ ಸುರ್‌ಲಿ ನೋಡ್ತಿದ್ದದ್ ಎರಡ್ ಮನೆಯವರ ಗೋತ್ರ, ಗಣಕೂಟ, ಶರೀರದ ಬೆಳವಣಿಗೆ ಅಂದರೆ ಮರ ನೋಡಿ ಬಳ್ಳಿ ನೆಡಕುತ್ತೇಳುವ ಗಾದೆಯಂಗೆ. ಇದಲ್ಲದೆ ಗೂಡೆ ಒಳ್ಳೆ ಕೆಲಸಗಾರ್ತಿ, ಹಂಗೆನೆ ಹೈದ ಒಳ್ಳೆ ಬುದ್ಧಿವಂತ, ಇದಿಷ್ಟ್ ತಿಳ್ಕಂಡ್ ಆಮೇಲೆ ಗಂಡನಕಡೆಂದ ಒಬ್ಬ ತಿಳುವಳಿಕೆಗಾರನ ಮತ್ತೆ ಹೆಣ್ಣ್‌ನ ಕಡೆಂದ ಒಬ್ಬ ತಿಳುವಳಿಕೆಗಾರನ ಮುಖಾಂತರ ಮದುವೆಗೆ ಒಪ್ಪಿಗೆ ಕೊಡ್ತಿದ್ದೊ. ಇದಾದ ಮ್ಯಾಲೆ ಗೌಡಸಂಸ್ಕೃತಿ ಪ್ರಕಾರ ಮದುವೆ. ಇಂದ್:- ಇಂದ್ ಹೈದ ಎತ್ತರ, ದಪ್ಪ, ಬೆಳ್ಳಂಗೆ ಉಟ್ಟ ಹಂಗೆನೆ ಗೂಡೆ ಎತ್ತರ ದಪ್ಪ ಬೆಳ್ಳಂಗೆ ಉಟ್ಟ್ ಇಬ್ಬರ್ ಎಷ್ಟೆಷ್ಟು ಓದಿಯಳೊ, ಎಂತೆಂತ ಚಾಕ್ರಿಲಿ ಒಳೊ, ತಿಂಗಳಿಗೆ ಇವರಿಬ್ಬರ ಸಂಬಳ ಎಷ್ಟ್, ಸೈಟ್ ಎಷ್ಟು ಉಟ್ಟು, ಬೆಂಗಳೂರು, ಮುಂಬಾಯಿ ಅಥವಾ

ಮೈಸೂರು ಪೇಟೆಗಳಲ್ಲಿ ಎಷ್ಟು ಮನೆ ಉಟ್ಟು, ಕಾರ್ ಬೈಕ್ ಉಟ್ಟಾ, ನಾಡ್ ಜೀವನ ಬ್ಯಾಡ, ಪ್ಯಾಟೆ ಜೀವನ ಮಾಡಕು, ಇದೆಲ್ಲಾ ಇದ್ದರ್ ಸಹ ಐ ಲವ್ ಯೂ ತ್ತೇಳಿ ಪಾರ್ಕ್‌ಲಿ ಪ್ಯಾಕೇಟ್ ತಿಂಡಿ ತಿಂದ್ ಜ್ಯೂಸ್, ಐಸ್‌ಕ್ರೀಂ ಎಲ್ಲಾ ತಿಂದ್ ಆದ್‌ಮೇಲೆ ಪರ್‍ವಾಗಿಲ್ಲೆತ್ತೇಳಿ ಮದುವೆ ಏರ್ಪಾಡ್ ಆದೆ.

**ಇನ್ ಮುಂದೆ :-**

ಇನ್ ಮುಂದೆ ಮದುವೆತ್ತೇಳಿರೆ ಒಂದು ಅರ್ಥ ಇಲ್ಲದಾದೆ. ಹುಟ್ಟುವ ಕೂಸ್‌ನ ಸಾಕುದು ಯಾರ್‌ತೇಳ್ದ ಮಟ್ಟಕೆ ಬಂದದೆ. ಅದೆಂಗೆತ್ತೇಳಿರೆ ಕರ್ಣಂಗೆ ತನ್ನ ಅವ್ವ ಅಲ್ಲೇ ಇದ್ದರೂ ಸಹ ಅವ್ವ ಯಾರ್‌ತ್ತೇಳ್ದು ಗೊತ್ತಿರುದುಲ್ಲೆ. ಅಪ್ಪ ಯಾರ್‌ತೇಳ್ದು ಗೊತ್ತಿರುದುಲ್ಲೆ. ಕೆಲವು ಹೇಳಿವೆ ಸೂರ್ಯನ ಮಂತ್ರಂದ ಹುಟ್ಟಿದ್‌ತಾ: ಹಂಗೆನೆ ಇನ್ ಮುಂದೆ ನಡ್ದದೆ. ಕೂಸನ ಅವ್ವ ಸಾಕುದರ್‌ಂದ ಅಪ್ಪನ ಹೆಸರ್ ಬುಟ್ಟು ಅವ್ವನ ಹೆಸರ್‌ಲಿ ಬೆಳ್‌ಸುವೆ. ಹೆಂಗೆತ್ತೇಳಿರೆ ಪಾಂಡು ರಾಜನ ಮಕ್ಕತ್ತೇಳುವ ಬದಲಾಗಿ ಕುಂತಿ ಪುತ್ರರು ಕುಂತಿಯ ಮಕ್ಕತ್ತೇಳ್ದಂಗೆ.

ಅದಕ್ಕಾಗಿ ಹೇಳ್ದು ಸಂಸ್ಕೃತಿ ಕೈ ಬಿಡ್‌ಬಡಿ. ಓಂದು ಧರ್ಮದ ಸಂಸ್ಕೃತಿಯಂತದ್ ಬ್ಯಾರೆ ಬ್ಯಾರೆ ಸಂಸ್ಕೃತಿಯಲ್ಲಿ ಕಾಂಬಲೆ. ಹಂಗೆನೆ ಅರೆಭಾಷೆ ಅಕಾಡೆಮಿಯವು ಗೌಡ ಸಂಸ್ಕೃತಿನ ಉಳಿಸಿ ಬೆಳೆಸಿ. ಮುಖ್ಯವಾಗಿ ಹೇಳುದ್ತೇಳ್ರೆ ಮಕ್ಕಳಿಗೆ ಅವ್ವ ಅಪ್ಪ ಹೆಂಗೆನೋ ಹಂಗೆನೆ ಅರೆಭಾಷೆ ಅಕಾಡೆಮಿ. ಗೌಡ ಸಂಸ್ಕೃತಿ ಬೆಳೆಸಿ. ಹತ್ತ್ ಕುಟುಂಬ ಹದಿನೆಂಟ್ ಗೋತ್ರದವು ಅಂದ್ ಮಾಡ್ದ ಪದ್ಧತಿನ ಅನುಸರಿಸಿ ಮದ್ವೆ ಮಾಡಿ ಸುಖ ಸಂಸಾರ ಮಾಡಿ ಪದ್ದತಿ ಬೆಳೆಸಿ.

* * * * *

## ಆದಿ ಹುಟ್ಟು

ಸುರ್‌ಗೆ ಬುದ್ದಿಜೀವಿ ಮಾತ್ರ ಅಲ್ಲ ಈ ಪ್ರಪಂಚಲಿ ಇರುವಂತ ಎಲ್ಲಾ ಜೀವಿಗ ಅವ್ವನ ಮೂಲಂದ ಪ್ರಕೃತಿಗೆ ಬಂದದ್. ಅದ್ ಇಂದಿಗೆ ಸಹ ಉಟ್ಟು. ಇನ್ನ್ ಮುಂದೆ ಸಹ ಅದೆ ರೀತಿ ಅಲ್ಲದೆ ಅದನ್ನ ಬದಲಾಯಿಸಿಕೆ ಆದುಲ್ಲೆ.

## ಅಂತ್ಯ ಸಾವು

**ಅಂದ್ :** ಸುರ್‌ಗೆ ಹುಟ್ಟಿದಂತ ಈ ಪ್ರಪಂಚಲಿ ಇರುವಂತ ಎಲ್ಲಾ ಜೀವಿಗ ಒಂದಲ್ಲ ಒಂದು ದಿನ ಕಾಣದಾಕೆ ಸಾಕು. ಅಂದರೆ ಸತ್ತೇ ಸಾಯಕು. ಅದ್ ಇಂದಿಗೆ ಸಹ ಉಟ್ಟು ಇನ್ ಮುಂದಕ್ಕೆ ಸಹ ಉಟ್ಟೇ ಉಟ್ಟು..

**ಒಂದು ಅನಿಸಿಕೆ :** ಈ ಮೇಲೆ ಹೇಳ್ದ ಅತ್ಯಂತ ಮುಖ್ಯವಾದ ಎರಡ್ ವಿಷಯಗಳ್ನ ಬುದ್ದಿ ಜೀವಿಗಳಾದ ನಾವು ನಮ್ಮ ಜೀವನದ ದಾರಿಲಿ ಅನುಸರಿಸಿ ಕಂಡ್ ಹೋದರೆ ಇದೆ ಸ್ವರ್ಗಲೋಕ. ಇದೇ ಮುಕ್ತಿ ಲೋಕ. ಬದ್‌ಕಿರ್‌ಕಾಕನ ಶರೀರ ಇದ್ದದೆ. ಸತ್ತಮ್ಯಾಲೆ ಆತ್ಮ ಇದ್ದದೆ. ಅವು ಅವು ಮಾಡಿದ ಪಾಪ ಕರ್ಮಗಳಿಗೆ ಸರಿಯಾಗಿ ತಿರುಗಾಡಿವೆ. ಹೆಂಗೋ ನಾವೆಲ್ಲಾ ಈ ಪ್ರಪಂಚಕ್ಕೆ ಬಂದಳೊ ಹಂಗೆನೆ ಅವಧಿ ಮುಗಿಸಿ ಹೋಕು. ಅಂದರೆ ಬಾಕನ ಬೆತ್ತಲೆ ಹೋಕನ ಬೆತ್ತಲೆ. ಅದೆ ಗೊತ್ತಿಲ್ಲದೆ ಬರುವಂತಹ ಬೆತ್ತಲೆ. ಈ ನಡುಲಿ ಅನಾವಶ್ಯಕವಾಗಿ ನಂದ್ ನಂದ್‌ತ್ತೇಳಿ ಒದ್ದಾಡುದು ಅನಾವಶ್ಯಕ. ಅವ್ವನ ಆಚಾರ ವಿಚಾರ ಸಂಸ್ಕೃತಿ ಪ್ರಧಾನ. ಅವ್ವನ ನಡೆ–ನುಡಿಗಳನ್ನ ಕೊಂಡಾಡಿ ಬೆಳೆಸಿ.

* * * * *

# ಪುಟ್ಟ ಪುಟ್ಟ ಪದ್ಧತಿಗ ಮತ್ತೆ ಪದ ಹಾಡು

## ರೈತರ್

ಅಂದ್ ನಾವೆಲ್ಲಾ ಹೆಚ್ಚಾಗಿ ಸುರ್‌ಲಿ ರೈತರ ಗದ್ದೆಗೆ ಎತ್ತ್‌ಕಟ್ಟಿ ಹೊಡ್ದವು. ಎತ್ತ್‌ಕಟ್ಟುವ ದಿನತ್ತೇಳಿರೆ ಬಿಸು ಅಥವಾ ಯುಗಾದಿ. ಆ ದಿನ ಬೆಳಿಗ್ಗೆ ಎದ್ದ್ ಒಂದ್ ಕುಕ್ಕೆ ಸಗಣಿ ಗೊಬ್ಬರ ತಕಂಡ್ ಎತ್ತ್‌ಕಟ್ಟುವ ಗದ್ದೆಗೆ ಹಾಕಿ ಅದರ ಮ್ಯಾಲೆ ಸರಳಿ ಸೊಪ್ಪು ಹಾಕಿ ಒಂದು ಸರಳಿ ಮರದ ಕೋಲು ಸೊಪ್ಪು ಸಮೇತ ತಂದ್ ಇಡ್ದು. ಮಕ್ಕ ನೇಗಿಲ್‌ನೊಗ ತಕಂಡ್ ಎತ್ತ್ ಹೊಡ್ಕಂಡ್ ಬಂದವೆ. ಗೊಬ್ಬರದ ಮ್ಯಾಲೆ ಒಂದು ಕೊಡಿ ಬಾಳೆಲೆ ಮಡ್‌ಗಿ ಅದರ್‌ಲಿ ಗಣಪತಿಗೆ ಮಡ್‌ಗಿವೆ. ಒಂದು ಕಾಯಿಒಡ್ದ್ ನೆನೆಯಕ್ಕಿ ಮಾಡಿವೆ. ಅಂದರೆ ಪಚ್ಚೆಲಿ ಸ್ವಲ್ಪ ಬೆಳ್ತಕ್ಕಿ ಹಾಕಿ ಅದಕ್ಕೆ ಕಾಯಿಚೂರಿಗಳ್ನ ಹಾಕುವೆ. ಸ್ವಲ್ಪ ಕರಿಎಳ್ಳ್ ಹಾಕುವೆ, ಹುರಿಕಡ್ಲೆ ಹಾಕುವೆ, ಬೆಲ್ಲನ ಕತ್ತಿಲಿಹೆರ್‌ದ್ ಹಾಕಿವೆ, ಕಾಯಿ ನೀರ್‌ನ ಅದಕ್ಕೆ ಹಾಕಿ ಪಚ್ಚೆನ ಸರಿಯಾಗಿ ಆಡಿಸಿ

ಮಿಶ್ರಮಾಡಿವೆ. ಸ್ವಲ್ಪಗಂಧದ ಬೊಟ್ಟು ಮಾಡಿದ್ದವೆ. ಸ್ವಲ್ಪ ಹೂ ಗಣಪತಿಗೆ ಮಡ್ಗಿವೆ. ಎತ್ತ್‌ಗಳ್ನ ಮೂಡಕ್ಕೆ ಮುಖಮಾಡಿ ನಿಲ್ಸಿ ಚಾಂಪ (ಚಾಮಿಯಪ್ಪ) ಹಿರಿಯವು, ಗಣಪತಿ ಇಗ್ಗುತಪ್ಪ ಕಾವೇರಮ್ಮ ಕೊಟ್ಟು ಕೊಂಡಾಡುವ ಊರ್‌ದೇವರ್ ಮತ್ತೆ ಮನೆ ದೇವರ್ನ ಗ್ಯಾನ ಮಾಡಿ ಅಥವಾ ಹೇಳಿಕಂಡ್ ಎತ್ತ್‌ಗಳ ಹೆಗಲಿಗೆ ನೊಗ ಇಟ್ಟವೆ. ನೇಗಿಲ್‌ನ ತೊಡೆಕಟ್ಟ್‌ಗೆ ಸಿಕ್ಕಿಸಿ ಆಗಲೆ ತಂದ್ ಮಡಗಿದ್ದ ಕೋಲ್ ತಕ್ಕಂಡ್ ಅಪ್ಪ ಹೂಡ್ತೆ. ಸುರ್‌ಗೆ ಮೂರು ಸುತ್ತ ಹೂಡ್ತೆ. ಮತ್ತೆ ಅದಕ್ಕೆ ಸೇರಿಸಿ ಹೊಳಿಹೊಡ್ದ್ ಮೂರು ಸುತ್ತು ಹೂಡ್ತೆ. ಮತ್ತೆ ಎತ್ತ್‌ಗಳ್ನ ಮೇಯಕ್ಕೆ ಬುಟ್ಟವೆ. ನೊಗನೇಗಿಲ್, ಸೊಪ್ಪುಕೋಲ್‌ನ ಮನೆಗೆ ತಕ್ಕಂಡ್ ಹೋದವೆ. ಸುರ್‌ಗೆ ಹೂಡ್ದ ಆ ಸೊಪ್ಪುಕೋಲ್‌ನ ಮನೆ ಒಳಗೆ ಸೂರ್‌ಲಿ ಸಿಕ್ಕಿಸಿ ಇಟ್ಟಿದ್ದವೆ. ಗದ್ದೆಲಿ ಮಾಡ್ದ ಪ್ರಸಾದನ ಮನೆಗೆ ತಂದ್ ಎಲ್ಲವೂ ಸೇರಿ ಹಂಚಿ ತಿಂದವೆ. ಗಂಧದ ಬೊಟ್ಟ್ ಎತ್ತ್‌ಗಳಿಗೆ ಹಾಕುವೆ ಮತ್ತೆ ಎಲ್ಲವೂಸಹ ಬೊಟ್ಟು ಹಾಕಂಡವೆ. ಆ ಮ್ಯಾಲೆ ಗದ್ದೆ ಹದಬೀಳ್‌ಕಾಕನ ಅವರವರ ಅನುಕೂಲಕ್ಕೆ ತಕ್ಕಂಗೆ ಗದ್ದೆ ಹೂಡುವಪದ್ದತಿ.

ಇಂದ್ - ಮನೆಲಿ ಎತ್ತ್‌ಗ ಇಲ್ಲೆ. ನೇಗಿಲ್‌ನೊಗ ಮೊದಲೆ ಇಲ್ಲೆ. ಹೂಡ್ಬುತ್ತೇಳಿರೆ ಹರ–ಹೀ–– ತ್ತೇಳ್ದು ಗೊತ್ತೇ ಇಲ್ಲೆ.

ಮುಂದೆ - ಅದೆಲ್ಲಾ ಎಂತಾಪದ್ದತಿ? ದನ ಸಾಕುದು ಯಾರ್? ಎತ್ತ್‌ಕಟ್ಟಿ ಹೂಡ್ದು ಯಾರ್? ಟ್ರ್ಯಾಕ್ಟರ್ ತಂದ್ ಹೂಡಿಸಿರೆ ಆತ್, ಹಂಗಾಗಿ ಮೂಲ ಪದ್ದತಿ ಗೊತ್ತಿರುದುಲೆ.

## ಯಾಕಲಿಗೆ ಬೀಜ ಹಾಕುದು.

ಅಂದ್ - ಯಾಕಲಿಗೆ ಐದ್‌ಸಾಲ್ ಹೂಡಿ, ತಾವೆ ಹೊಡ್ದ್ ಸಮಮಾಡಿ ಯಾಕಲ್ ನಡುಲಿ ಕೆಸ ನೆಟ್ಟ್ ಮೂರ್ದಿನ

ಕಳ್ದ ಮೇಲೆ ನೀರ್‌ಆರಿಸಿ, ಬೀಜಹಾಕುತ್ತಿದ್ದೋ, ಬೀಜ ಸರಿಯಾಗಿ ಹುಟ್ಟುದುಲೆತ್ತೇಳಿ ಮೊಳಕೆ ಬರ್‌ಸಿ ಹಾಕುತ್ತಿದ್ದೊ.

ಇಂದ್ – ಟ್ರಾಕ್ಟರ್ ಹೂಡಿ ಆತ್, ಎರಡ್ ದಿನ ನೀರ್ ಕಟ್ಟಿದೋ. ಬೀಜ ಮೊಳಕೆ ಬರ್‌ಸಿ ಹಾಕಿದೋ. ತಾವೆ ಹೊಡ್ದ್ ಯಾಕಲ್ ಸಮ ಇಲ್ಲಂದಕಂಡ್ ಬೇಜಾರಾಗಿ ಬೆಳ್ದ್ ಬಂದ ಅಗೆನ ತಕ್ಕೊಂಡೋಗಿ ನಾಟಿ ನೆಟ್ ಕೆಲಸ ಮುಗುಸುತ್ತೊಳೊ.

ಮುಂದೆ – ಅಯ್ಯೋ ಈ ಗದ್ದೆಕೆಲಸ ಮಾಡಿ ಬೆಳೆಬೆಳ್ದ್ ಭತ್ತ ಮನೆಗೆ ಬಂದ್ ಅಕ್ಕಿ ಮಾಡಿಸಿ ತಂದ್ ಉಂಬದ್‌ಕ್ಕಿಂತ ಪ್ಯಾಟೆಲಿ ಒಳ್ಳೆಅಕ್ಕಿ ಸಿಕ್ಕಿದೆ ಅದನ್ನ ಲೆಕ್ಕಾಚಾರ ಹಾಕಿವೆ. ಬಹಳ ಕಮ್ಮಿ ಖರ್ಚಿಗೆ ಆದೆ. ಅದರ್‌ಂದ ಈ ಎತ್ತು ಕಟ್ಟುದು, ಎತ್ತ್‌ಗಳ್ನ ಸಾಕುದು ಗೊಬ್ಬರ ಮಾಡಿ ಗದ್ದೆಗೆ ಗೊಬ್ಬರ ಹಾಕುದು ಇದೆಲ್ಲಾ ಯಾರಿಗೆ ಬೇಕುತ್ತೇಳಿಕೊಂಡವೆ. ಅಲ್ಲಿಗೆ ಮೂಲ ಪದ್ಧತಿ ಮೂಲೆ ಗುಂಪಾದೆ.

ಅಂದ್ ಹತ್ತ್ ಕುಟುಂಭದವು ಸೇರಿಕಂಡ್ ಅಗೆ, ಬೆಳೆ ಕೆಲಸ ಮಾಡುತ್ತಿದ್ದೋ. ಹಂಗೆನೆ ಹತ್ತು ಕುಟುಂಬದವರೊಂದಿಗೆ ಇನ್ನ್ ಎಂಟ್‌ಕುಟುಂಬದವು ಸೇರಿಕಂಡ್ ಮದುವೆಮುಂಜಿ ಮಾಡ್‌ತ್ತಿದ್ದೋ. ಇಂದ್ ಇದನ್ನೆಲ್ಲಾ ಬಾಯಿಪಾಠ ಮಾಡಿಕಂಡ್ ಅಳ್ದೂರಿಗೆ ಉಳ್ದವನೇ ಗೌಡತ್ತೇಳ್ದಂಗೆ ಅಲ್ಪ– ಸ್ವಲ್ಪ ತಿಳ್‌ದವ ಹೇಳ್ದಂಗೆಕೇಳಿಕಂಡ್ ಮದುವೆಮುಂಜಿ ಮಾಡ್ತೋಳೊ. ಆದರೆ ಈಗ ನಮ್ಮ ಅರೆಭಾಷೆ ಅಕಾಡೆಮಿಯವು ಹಳೆಯ ಸವಿನೆನಪುಗಳ್ನ ಅಂದರೆ ಪದ್ಧತಿನ ಗೌಡಬಾಂಧವರ ಮುಂದೆ ತರ್‌ತ್ತೊಳೊ. ಮುಂದೆ ಆ ಪದ್ಧತಿ ಎಂದೆಂದಿಗೂ ಹಾಳಾಗದಂಗೆ (ಕೈ ಬುಡದಂಗೆ) ನಡ್ಸ್‌ಕಂಡ್ ಹೋಗುವಂಗೆ ನಮ್ಮ ಕುಲದೇವರಾದ ಲಕ್ಷೀ ವೆಂಕಟೇಶ್ವರ ಸ್ವಾಮಿಯ ಅನುಗ್ರಹ ಇರಲಿತ್ತೇಳಿ ನಾವೆಲ್ಲವೂ ಬೇಡಿಕಂಡ್ ಅಕಾಡೆಮಿಯವರೊಟ್ಟಿಗೆ ಸಹಕರಿಸನೊ.

ಈಗ ಹತ್ತ್ ಕುಟುಂಬಸ್ತರ ಗೋತ್ರದ ಸಹಾಯಕ್ಕೆ ಬೇಕಾದ ಎಂಟ್ ಕುಟುಂಭ:-

| | |
|---|---|
| 1 ಬಂಗಾರ ಗೋತ್ರ | 1 ಬ್ರಾಹ್ಮಣ (ಹಾರುವಯ್ಯ ) |
| 2 ನಂದಾರ್ ಗೋತ್ರ | 2 ಅಕ್ಕಸಾಲಿಗ - ಚಿನಿವಾರ (ಚಿನ್ನದ ಕೆಲಸ) |
| 3 ಕಬರ್ ಗೋತ್ರ | 3 ಶೆಟ್ಟಿ - ಬಳೆಗಾರ ( ಬಳೆ ಮಾರಾಟ) |
| 4 ಮೂಲಾರ್ ಗೋತ್ರ | 4 ಬಟ್ಟೆ ವ್ಯಾಪಾರಿ |
| 5 ಹೆಮ್ಮನ ಗೋತ್ರ | 5 ಓಲಗ |
| 6 ದೇವಗೋತ್ರ (ಚಿತ್ರಗೋತ್ರ) | 6 ಕ್ಷೌರಿಕ |
| 7 ನಾಯಕ್ ಗೋತ್ರ | 7 ಮಡಿವಾಳ (ಡೋಬಿ) |
| 8 ಬರ್ಶನ ಗೋತ್ರ | 8 ತಾಮ್ರ ಕೆಲಸದವ |

9 ಶೆಟ್ಟಿ ಗೋತ್ರ (ಕಂಚಿಮುಟ್ಟು, ಮಣ್ಣಿನ ದೀಪ, ಚಾಪೆ ಆಚಾರಿ)
10 ಗುಂಡನ ಗೋತ್ರ

ಇವರೆಲ್ಲರ ಸಹಕಾರಂದ ನಡ್ಸುವ ಈ ಮದ್ವೆ ಜಂಬರಲಿ ಈ ಹತ್ತು ಗೋತ್ರದ ಕುಟುಂಬಸ್ಥರಿಗೆ ಈ ಎಂಟು ಸಹಾಯಕ ಕುಟುಂಬಸ್ಥರಿಗೆ ಒಂದು ಗೌರವ ಕೊಟ್ಟ್ ಅಂದರೆ ಮರ್ಯಾದೆ ಕೊಟ್ಟ್ ಅಭಿನಂದಿಸಿ ಈ ಕಾರ್ಯಕ್ರಮನ (ಜಂಬರನ) ಸರಿಯಾಗಿ ನಡ್ಸಿಕೆ ಸಹಕರಿಸಿತ್ತೇಳಿ ಆಗಾಗ ಕೇಳಿಕಂಬಂತ ಒಂದ್ ಪದ್ಧತಿ ಅಥವಾ ನಡ್‌ಪು. ಇದ್ ಅಂದ್‌ಂದ ಇಂದ್‌ಮುಟ್ಟ ನಡ್ಕಂಡ್ ಬರ್ತುಟು. ಆದರೆ ಇಂದ್‌ನ ಈ ರಿಜಿಸ್ಟರ್ ಮದುವೆಲಿ ಅದರ್ನ ಕೈಬುಡ್‌ತ್ತಳೊ ಮುಂದೆ ರಿಜಿಸ್ಟ್ರ ಮದ್ವೆ ಆದರು ಸಹ ಎರಡ್ ಕಡೆಯವು (ಉಭಯ ಸೇರಿಕಂಡ್ ಬಂದ್ ಅಕ್ಕಿಮೂಹೂರ್ತ ಇಟ್ಟ್‌ಕಂಡ್ ಅಲ್ಲಿ ಅಥವಾ ಆ ದಿನದಂದ್ ಈ ಪದ್ಧತಿನ ಸಾಧ್ಯವಾದಷ್ಟು ಮಟ್ಟಿಗೆ ಅನುಸರಿಸಿಕಂಡ್ ಹೋಗುವಂತದ್ದಕ್ಕೆ ನಮ್ಮ ಅಕಾಡಮಿಯವು ಹೆಚ್ಚಿಗೆ ಗಮನಹರಿಸಿ ಗೌಡ ಬಾಂಧವ್‌ಕೆ ತಿಳುವಳಿಕೆ ನೀಡಿರೆ ಮಾತ್ರ ನಮ್ಮ ಮೂಲ ಪದ್ಧತಿನ ಉಳಿಸಕ್.

ಇಲ್ಲದಿದ್ದರೆ ಸಿನೆಮಾ ರೀತಿಲಿ ಮದುವೆ ಆದೆ. ಕೂಸಿಗೆ ಅವ್ವ ಅಪ್ಪ ಇಲ್ಲೆ, ಅವ್ವ ಅಪ್ಪಂಗೆ ಮಕ್ಕ ಇರುದುಲೆ.

# ಪದ (ಹಾಡ್)

ಪಲ್ಲವಿ :ಆದಿ ಶಕ್ತಿಯೇ ನಮ್ಮವ್ವಾ।
ಕೃಷ್ಣ ಪರಮಾತ್ಮನೆ ನಮ್ಮಪ್ಪಾ।
ಅಂದ್ ನಾವೆಲ್ಲಾ ಒಂದ್।
ಅವ್ವ, ಅಪ್ಪಾ ನಮಿಗೆಲ್ಲಾ ಒಂದ್।
ಇಂದ್ ನಾವೆಲ್ಲ ಬ್ಯಾರೆ ಬ್ಯಾರೆ ।
ಅವ್ವ ಅಪ್ಪ ನಮಿಗೆಲ್ಲಾ ಬ್ಯಾರೆ ಬ್ಯಾರೆ।
ಮುಂದೆ ಅವ್ವ ಅಪ್ಪ ಲೆಕ್ಕಕ್ಕಿಲ್ಲೆ।
ಸಂಸಾರತ್ತೇಳ ಪ್ರೀತಿ ಇಲ್ಲೆ।
ಪಲ್ಲವಿ :ಕೂಡಿ ಬಾಳುವೆ ಆಚಾರ ।
ಹೊಟ್ಟೆ ಕಿಚ್ಚ್ ಅನಾಚಾರ।
ಲಕ್ಷ್ಮೀ ವೆಂಕಟೇಶನೆ ನಮ್ಮಕುಲದೇವರ್।
ದೇವರ ಹೆಸರ್ನ ಕೊಂಡಾಡುದೆ ಮಂತ್ರ
ಪಲ್ಲವಿ :ಬೆಳೆ, ಮರ, ಗಿಡ ಬಳ್ಳಿ ಜೀವನಕಾದಾರ।
ಪ್ರಾಣಿ ಪಕ್ಷಿಗಳೆ ಪರಿಸರಕಾದಾರ
ಪ್ರಕೃತಿ ಉಳಿಸಿರೆ ನಮ್ಮ ಜೀವನಾ।
ಪ್ರಕೃತಿ ನಾಶನೆ ನಮ್ಮಂತ್ಯಾ॥

ಹತ್ತ್ ಕುಟುಂಬಸ್ಥರ್ ಸೇರಿಕಂಡ್ ಅಗೆ ತೆಗ್ದ್ ನಾಟಿ ನೆಡ್ದು , ಕೈಲ್‌ಪೋದ್ ಮಾಡ್ದು, ಆಟಿ ಪಾಯಿಸ ಮಾಡ್ದು, ಕಾವೇರಿ ಹಬ್ಬ ಮಾಡ್ದು, ಹುತ್ತರಿ ಹಬ್ಬ ಮಾಡ್ದು, ಬೆಳೆ ಕೊಯ್ಯುದು, ಹೊರ್ದು, ಒಕ್ಕಲು ಹಾಕುದು, ಹೊಸ ಭತ್ತ ಮನೆಗೆ ಹತ್ಸುದು,

ಹೊಸ್ತ್ ಮಾಡ್ದು , ಹಬ್ಬ ಮಾಡ್ದು, ಮತ್ತೆ ಮದುವೆ ಹಬ್ಬ ಇತ್ಯಾದಿ,. ಇತ್ಯಾದಿ., ಇದೆಲ್ಲಾ ಎಲ್ಲವೂ ಒಟ್ಟು ಕೂಡಿಕಂಡ್ ಮಾಡ್‌ತಿದ್ದ ಪದ್ಧತಿ ಅದರ್‌ಂದ ಈ ಹತ್ತು ಕುಟುಂಬದವುಕೂ (ಹತ್ ಗೋತ್ರದವು) ಇನ್ನಿರುವ ಎಂಟ್ ಗೋತ್ರದ ಕುಟುಂಬಸ್ಥರಿಗೂ ಅತೀ ಹತ್ರದ ಸಂಬಂಧ. ಅದರ್‌ಂದ ಒಬ್ಬನ ಬುಟ್ಟು ಯಾವ ಕೆಲ್ಸನ ಸಹ ಮಾಡ್‌ತಿತ್‌ಲೆ. ಅದ್‌ಕ್ಕಾಗಿ ಮಾಡ್ಕಂಡ ಈ ಪದ್ಧತಿನ ಜಂಬಾರಜೆಟ್ಟಿಗಳಲ್ಲಿ ಮರ್ಯಾದಿ ಕೊಟ್ಟ್ ಹೇಳಿಕಂಬಂತ ಪದ್ಧತಿ. ಇದನ್ನ ಉಳಿಸಿಕಂಡ್ ಹೋದರೆ ಈ ಪದ್ಧತಿನ ಮಾಡ್ದಂತ ನಮ್ಮ ಹಿರಿಯವ್‌ಕೆ ತುಂಬಾ ಗೌರವ ಕೊಟ್ಟಂಗಾದೆ. ಏನೆ ಬರಲಿ, ಪದ್ಧತಿ ಉಳಿಸಿ, ಬೆಳೆಸಿ, ಜೈ ಜೈ ಅಕಾಡಮಿಗೆ; ವೆಂಕಟರಮಣ ಸ್ವಾಮಿ ಅನುಗ್ರಹ ಇರ್‌ಲಿ, ಗುರು ಕಾರಣರ ಆಶೀರ್ವಾದ ಸದಾ ಇರಲಿ .

* * * * *

# ಕುಂಕುಮ ಮತ್ತೆ ಹೆಣ್ಣ್

ಆದಿಶಕ್ತಿಯೇ ನಮ್ಮವ್ವಾ; ಆದಿಶಕ್ತಿಯೇ ಭೂಮಿ, ಎಲ್ಲಿ ಕುಂಕುಮನೋ ಅದೆ ಹಿಂದುಮೂಲ ನಾವೆಲ್ಲ ಭಾರತದವ್ರು. ಹಿಂದೂಮೂಲದವ್ರು ಕುಂಕುಮ ಉಳಿಸಿತ್ತೇಳಿರೆ ಈ ಭಾರತ ಉಳಿಸಿ, ಹೆಣ್ಣ್ ಎಲ್ಲಿಟ್ಟೊ ಅಲ್ಲಿ ಕುಂಕುಮ ಉಟ್ಟು. ಈ ಕುಂಕುಮದ ಮೂಲವೇ ಅರಿಶಿನ. ಅದ್‌ಕ್ಕಾಗಿ ಅರಿಶಿನಕುಂಕುಮ ಸೌಭಾಗ್ಯ ಸಂಪನ್ನತ್ತೇಳ್ದು ಇದನ್ನ ಭಾರತೀಯರೆಲ್ಲರ್ ಅಂದರೆ ಹೆಣ್ಣ್-ಗಂಡ್ ಸಹ ತಪ್ಪದೆ ತಮ್ಮ ತಮ್ಮ ಹಣೆಗೆ ಹಚ್ಚಿಕಂಬದ್. ನಾವೆಲ್ಲವ್ರು ಆ ಆದಿಶಕ್ತಿಅವ್ವನ ಮಕ್ಕ. ಅದ್‌ರ್‌ಂದ ನಾವು ಸದಾ ಅವ್ವನ ಗ್ಯಾನ ಮಾಡಿಕೊಂಡೊಳೊ. ನಮ್ಮೆಲ್ಲವ್ರನ್ನ ಸದಾ ರಕ್ಷಣೆ ಮಾಡ್‌ತ್ತೇಳುವ ಒಂದು ಗುರುತೇ ಈ ಕುಂಕುಮ ಬೊಟ್ಟ್. ಆದರೆ ಹೆಣ್ಣ್ ಮಕ್ಕಳಿಗೆ ಇದೇ ಅವರ ತಾಳಿಭಾಗ್ಯ. ಹೆಣ್ಣ್‌ಮಕ್ಕ (ಹೆಂಗಸರಿಗೆ) ಅವರ ತಾಳಿಯೊಳಗೆ ಆ ಸ್ವಾಮಿ ಮತ್ತೆ ದೇವಿ (ಲಕ್ಷ್ಮೀನ) ಗ್ಯಾನ ಮಾಡಿ ಹಚ್ಚಿಕಂಬದ್. ಅಂದ್ ಇಂದ್ ಮುಟ್ಟ ಬಂದ ಪದ್ಧತಿ. ಇದ್ ಇನ್ನ್ ಮುಂದಕ್ಕೂ ನಡ್‌ಕಂಡ್ ಹೋದೆತ್ತೇಳಿಕೆ

ಧೈರ್ಯಬಾದುಲೆ. ಯಾಕೆತ್ತೇಳಿರೆ ಬಾಯಿತೆಗ್ದರೆ ಹೇಳುವ ವೇದವಾಕ್ಯತ್ತೇಳಿರೆ ಇದ್ ವಿಜ್ಞಾನದಯುಗ. ನಿಮ್ಮ ಮೂಢನಂಬಿಕೆನ ಬಿಡಿ. ಈಗ ಪ್ರೀತಿಸಿ ಯಾರ್‌ಯಾರ್‌ನ ಬೇಕಾದರೆ ಮದುವೆ ಮಾಡಿಕಣಕ್‌ತ್ತೇಳ್‌ವಷ್ಟ್ ಮುಂದ್‌ವರ್‌ದಳೊ. ಇದ್ ಕೇವಲ ತಾತ್ಕಾಲಿಕ ಮಾತ್ರತ್ತೇಳಕ್. ಈ ಕುಂಕುಮ ಬೊಟ್ಟ್ ಸಾಮಾನ್ಯ ಶಕ್ತಿ ಅಲ್ಲ. ಹೆಣ್ಣ್‌ಮಕ್ಕ ಸುರ್‌ಲಿ ದೇವರ್‌ನ ಬೇಡ್‌ಕಂಬದ್‌ತ್ತೇಳಿರೆ ನನ್ನ ಮಾಂಗಲ್ಯ ಅಂದರೆ ತಾಳಿಭಾಗ್ಯ ಉಳಿಸು ತಾಯಿ. ಹಂಗೆನೆ ಶ್ರೀ ಮಹಾವಿಷ್ಣು ವೆಂಕಟರಮಣ ಸ್ವಾಮೀತ್ತೇಳಿ.

ಇಂತ ಹೆಣ್ಣ್‌ಮಕ್ಕಳಿಗೆ ಗಂಡಸರಾದ ನಾವು ಕೊಡುವ ಅತ್ಯಂತ ದೊಡ್ಡ ಕಾಣಿಕೆತ್ತೇಳಿರೆ ಹೆಂಗಸರ್ ಅಬಲೆಯರು. ಕೇವಲ ಬೋಗಕ್ಕಾಗಿ ಇರುವ ಒಂದು ಸಾಧನತ್ತೇಳಿ ಅವಳ್‌ನ ಕೀಳ್ ಮಟ್ಟಂದ ನೋಡುದಲ್ಲದೆ ಕೆಲವೊಂದ್ ಆಚಾರವಿಚಾರಗಳಲ್ಲಿ ಅವುಕೆ ನಿರ್ಭಂಧನ ಹೇರ್‌ದು. ಇದ್ ಅಂದ್‌ನ ಕಾಲಂದ ನಡ್ದ್ ಬಂದದ್. ಇಂದ್ ಸಾಧಾರಣ ಅರ್ಧ ಭಾಗದವು ಅದನ್ನೇ ಆಚಾರತ್ತೇಳಿ ಪಾಲಿಸಿಕಂಡ್ ಬರುತ್ತೊಳೊ. ಇನ್ನ್ ಮುಂದೆ ಇದ್ ತಲೆಕೆಳಗಾಗುವ ಸಂದರ್ಭ ಬಂದರೆ ಬಾದು. ನಾವೆಲ್ಲವು ತಿಳ್‌ಕಣಿಕಾದ್ ಹೆಣ್ಣ್ ಎಂದೆಂದೂ ಅಬಲೆ ಅಲ್ಲ. ಅಂದ್ ಈ ಭೂಮಿ ಸೃಷ್ಟಿಸಿದ ಹೆಣ್ಣ್.

ಈ ಪ್ರಕೃತಿಲಿ ಇರುವ ಎಲ್ಲಾ ಜೀವಿಗಳ್ನ ಸೃಷ್ಟಿ ಮಾಡ್ದ್ ಹೆಣ್ಣ್. ದೇವರುಗಳಿಗೆ ಮತ್ತೆ ರಾಕ್ಷಸರಿಗೆ ಯುದ್ಧ ಆಗ್‌ತ್ತಿರ್‌ಕಾಕನ, ಆದಿಶಕ್ತಿ ರಾಜರಾಜೇಶ್ವರಿಯಾಗಿ ಅವತಾರ ತಾಳಿ ಹತ್ತ್ ಅವತಾರತಾಳಿ ರಾಕ್ಷಸರ್ನ ಸಂಹಾರ ಮಾಡ್ದ್ ಹೆಣ್ಣ್ ಅಂದ್‌ನ ವಿಚಾರ ಇರಲಿ ಇಂದ್ ಚಿತ್ತೂರು ರಾಣಿ ಚೆನ್ನಮ್ಮ ಓನಕೆ ಓಬವ್ವ, ಜಾನ್ಸಿ ಲಕ್ಷ್ಮೀಬಾಯಿ. ಇವೆಲ್ಲಾ ಹೆಣ್ಣ್‌ತಾನೆ. ಅಂದ್ ಸ್ವಲ್ಪ ಹೇಳಿದ್ ಈಗೀಗಾಗಿ ಇಂದಿರಾ ಗಾಂಧಿ ಭಾರತದ ಪ್ರದಾನ ಮಂತ್ರಿ ಆದ್ ಎಲ್ಲವುಕೆ ಗೊತ್ತುಟ್ಟು. ಇವೆ ಮುಖ್ಯ ಆದಾರ ದೇಶರಕ್ಷಣೆಗಾಗಿ

ಹೋರಾಡಿ ಜೀವ ಬಲಿದಾನ ಮಾಡ್ಡವು ಹೆಣ್ಣ್‌ತಾನೆ.

ಆದರೆ ಕಥೆಗಾರರ್ ಗುರುಗಳ್, ಪುರೋಹಿತರ್ ಮತ್ತೆ ಮಠಾದೀಶರ್  ಈ ಹೆಣ್‌ನ ಬಗ್ಗೆ ಬರೆದಂತ ಗ್ರಂಥಗಳ ಒಂದೊಂದು ಭಾಗಗಳ್ನ ಓದಿರೆ ಸುರ್‌ಗೆ ಎದ್ದ್ ಕಾಂಬದು ಹೆಣ್ಣ್‌ನ ರೂಪ, ಶರೀರ, ಅಂಗಾಂಗ, ತಲೆಕೂದಲು, ಕಣ್ಣನೋಟ, ಅಂಗೈ ಮತ್ತೆ ರಟ್ಟೆ ಶಕ್ತಿ, ಸೊಂಟ, ಅಂತಿಮವಾಗಿ ಅವಳು ಎಷ್ಟು ಜನ ಗಂಡಸರ್‌ನ  ಸಹ ಸೋಲಿಸುವಂತ ಶಕ್ತಿಯುಳ್ಳವಳು. ಇದೆಲ್ಲದಕ್ಕಿಂತ ಹೆಚ್ಚಾಗಿ ಅವಳು ಹೆತ್ತ್ ಬೆಳಸಿದ ಮಕ್ಕ? ಅವು ನಿಜವಾದ ಅಪ್ಪನ ಮಕ್ಕಳಲ್ಲತ್ತೇಳ್ದನ್ನ ಬರದ್‌ದ್ದೆ ಕಾಣುತುಟ್ಟು. ಇದ್ ನನ್ನ ಮನಸ್ಸಿಗೆ ಬಂದ್ ಅವಹೇಳನತ ಆಗುತುಟ್ಟು. ಇದ್ ಕುರ್‌ವಂಶದ ವಂಶಾಭಿ ವೃದ್ಧಿ ಬಗ್ಗೆ ಪರ್ವ ಪುಸ್ತಕಲಿ ಬರ್‌ದದ್  ಎದ್ದ್ ಕಾಣುತುಟ್ಟು.

ನಾನ್ ಹಿಂದೆ ಬರ್‌ದೊಳೆ ಒಂದ್ ಹೆಣ್ಣ್-ಗಂಡ್ ಸೇರದೆ ಇದ್ದರೆ ವಂಶ ಬೆಳೆಯೊದುಲ್ಲೆತ್ತೇಳಿ. ಇಲ್ಲಿ ಈ ಗಂಡ್ ಮೇಲ್‌ತ್ತೇಳಿ ಬರೆಯುವ ಬರಹಗಾರರ್ ಬರಿ ಹೆಣ್‌ನ ಅತೀ ಕೀಳ್‌ಮಟ್ಟಕ್ಕೆ ಅವಹೇಳನ ಮಾಡಿ ಬರಿತೊಳೊ. ಇದ್‌ರಲಿ ಗಂಡ್‌ನ ಪಾತ್ರ ಉಟ್ಟೇಉಟ್ಟುತ್ತೇಳ್ದು ಎಲ್ಲವುಕ್ಕು ಗೊತ್ತಿದ್ದರು ಸಹ ನಾವು ಗಂಡೇ ಮೇಲ್‌ತ್ತೇಳಿ  ಹೇಳಿಕಂಡ ಬರೆಯುದು ಅನರ್ಥವಾಗಿ ಕಾಣುತುಟ್ಟು. ಇದಕ್ಕೆ ಕಾರಣ ಸಹ ಹೆಣ್ಣ್‌ತ್ತೇಳಕ್. ಯಾಕೆತ್ತೇಳಿರೆ ಅಂದ್ ಬಟ್ಟೆಬರೆ ಇಲ್ಲದೆ ಸೊಪ್ಪಿಂದ ಮೈಮುಚ್ಚಿಕೊಂಡಿದ್ದರು ಸಹ ಗಂಡಸ್ನರಿಗೆ ಬರೀ ಮೈಲಿ ತನ್ನ ಅಂಗಾಂಗಗಳ್ನ ತೋರಿಸುತ್ತಿತ್‌ಲೆ, ಇಂದ್ ತನ್ನ ಬಾಹ್ಯಶರೀರನ ಗಂಡಸರ ದೃಷ್ಟಿಗೆ ಬೀಳಿಸಿ ತನ್ನನ್ನ ಆಕರ್ಷಣೆ ಮಾಡೊಕು ತನ್ನನ್ನ ಊರು, ರಾಜ್ಯ, ದೇಶ, ವಿದೇಶಗಳಲ್ಲಿ ಹೊಗಳುವಂತವು ಇರೊಕು, ಇದೇ ಹೆಣ್ಣಿನ ಶ್ರೇಷ್ಠತನತ್ತೇಳಿ  ಹೆಣ್ಣ್ ಕ್ಯಾಮರಮುಂದೆ ಯಾವ್ಯಾವ ರೀತಿ ಬಟ್ಟೆ ಹಾಕಂಡ್ ಹಣದ ಆಸೆಗಾಗಿ ಕುಣಿಯುತ್ತೊಳೊ. ಇದನ್ನ ಹೆಣ್‌ತ್ತೇಳುವ ಸಮಾಜ ಬಹಿಷ್ಕಾರಹಾಕುತ್ತಲೆ ಇದನ್ನ ನಿರ್ಮೂಲನೆ ಮಾಡುವಂತ ಪೂರ್ತಿ

ಶಕ್ತಿ ಇರೊದು ಹೆಣ್‌ಲ್ಲಿ ಮಾತ್ರ. ಯಾಕೆತ್ತೇಳಿರೆ ಒಬ್ಬ ಗಂಡ್ ಇದನ್ನಹೇಳಿರೆ ಅವಂಗೆ ಸಿಕ್ಕುವಂತ ಉತ್ತರ ಇದ್. "ಇದ್ ನನ್ನಿಷ್ಟ, ನಿಂಗೆ ನೋಡಿಕಾಗದಿದ್ದರೆ ಕಣ್ಣ್ ಮುಚ್ಚಿಕೊಂಡ್ ಹೋಗ್ ಇಂವ ಒಬ್ಬ ಕೈಲಿ ಹರಿಯದವ, ಜಿಪುಣ, ಅಂವಗೆಲ್ಲಿ ಗೊತ್ತುಟ್ಟು ಇದರ ಮಜಾ."

## ಆದರೆ ಇನ್ನ್ ಮುಂದಕ್ಕೆ :-

ಭಾರತ ದೇಶದ ಸಂಸ್ಕೃತಿ ಕಾನೂನು ಕಾಯ್ದೆಯ ಪ್ರಕಾರ ಹುಚ್ಚ ಹುಚ್ಚಿ ಬಿಟ್ಟ್ ಉಳಿದವು ಬರಿ ಮೈಲಿ ತಿರ್‌ಗಾಡ್‌ಕಂಡ್ ಹೋದರೆ ಅಪರಾದತ್ತೇಳುವುದರಿಂದ ಕೇವಲ ತನ್ನ ಗುಪ್ತಾಂಗಗಳನ್ನ ಮಾತ್ರ ಮುಚ್ಚಿಕೊಂಡ್ ಪಾಶ್ಚಾತ್ಯ ಸಂಸ್ಕೃತಿತ್ತೇಳಿ ರಾಜಾರೋಶವಾಗಿ ತಿರುಗಾಡುವ ಕಾಲ ಬಂದೇ ಬಂದದೆ. ಅಲ್ಲಿಗೆ ಈ ಕಲಿಯುಗ ಸಹ ಅಂತ್ಯ ಆದು ಕಂಡದೆ.

* * * * *

# ನಮ್ಮ ಐನ್‌ಮನೆ, ನಮ್ಮ ಕುಟುಂಬ ಪೂಜಾರೀರ ಕುಟುಂಬ

ಮೂಲ ಮನೆನೆ ನಮ್ಮ ಐನ್‌ಮನೆ, ಅಂದರೆ ನಾನ್ ಹುಟ್ಟಿಬೆಳೆದ ನಮ್ಮ ಕುಟುಂಬಸ್ಥರ ಐನ್‌ಮನೆ. ಮತ್ತೆ ಈ ಕುಟುಂಬಸ್ಥರ ಜೀವನ ಕ್ರಮ ಅಂದ್, ಇಂದ್, ಇನ್ ಮುಂದೆ.

ನಮ್ಮ ಪೂರ್ವಜ್ಜನ ಮನೆ, ಸುಬ್ರಮಣ್ಯ ತಾಲೂಕು, ಯಾನೆಕಲ್ ಪೂಜಾರಿ ಮನೆ, ಅಲ್ಲಿ ನಾವೆಲ್ಲ ಪೂಜಾರಿ ಮನೆ ಕುಟುಂಬಸ್ಥರ್, ಇಲ್ಲಿ ನಾವೆಲ್ಲ ಪೂಜಾರಿರ ಮನೆ ಕುಟುಂಬಸ್ಥರ್ ಅಂದರೆ ಅಲ್ಲಿ ಇಲ್ಲಿ ನಾವೆಲ್ಲ ಮೂಲಾರ್ ಗೋತ್ರದವು. ಅಲ್ಲಿನ ಗ್ರಾಮದೇವರು ಬಚ್ಚನಾಯಕ. ಆ ದೇವರಿಗೆ ಪೂಜಾರಿ ನಮ್ಮ ಕುಟುಂಬದವು ಬಚ್ಚ ನಾಯಕನ ಮುಡುಪು ಆಯುಧಗ ಎಲ್ಲಾ ಈ ಪೂಜಾರಿ ಮನೆಲೆ ಇರುದು. ಅದಕ್ಕಾಗಿ ಆ ಮನೆ ಪೂಜಾರಿ ಮನೆತ್ತೇಳುವ ಹೆಸರ್ ವಂಶಪಾರಂಪರ್ಯವಾಗಿ ಬಂದದ್. ಇಲ್ಲಿ ಪೂಜಾರೀರ ಯಾಕೆ ಆತ್‌ತ್ತೇಳಿರೆ, ಇಲ್ಲಿಯ ಗ್ರಾಮೀಣ ಭಾಷೆಗೆ ಅನುಸರಿಸಿಕಂಡ್ ಕರಿಯಕಾರನ ಪೂಜಾರೀರ (ಪೂಜಾರರ್)ತ್ತೇಳಿ ಬಂದದ್. ಆದರೆ ಲಿಂಗರಾಜನ ಕಾಲಲಿ ನಮಿಗೆಕೊಟ್ಟ ನಿರುಪಲಿ ಪೂಜಾರಿತ್ತೇಳಿಯೇ ಉಟ್ಟು. ಅಂದರೆ ಜಮ್ಮ, ಉಂಬುಳಿ

ಕೊಡ್‌ಕಾಕನ ಕೊಟ್ಟಂತಹ ನಿರೂಪ. ಅದಕ್ಕೆ ಮುಂದೆ ಇಲ್ಲಿಗೆ ಯಾಗ ಬಂದಳೊ ದೇವರಿಗೆ ಗೊತ್ತ್. ಈಗ ನಮ್ಮಲ್ಲಿ ಇರುವ ಆದಾರದ ಪ್ರಕಾರ 1834 ರಲ್ಲಿ ಜಮ್ಮ ಉಂಬಳಿ ಕೊಟ್ಟ್, ಪಟ್ಟೆ ಕೊಡ್‌ಕಾಕನ ಇದ್ದದ್ ನಮ್ಮ ಕುಟುಂಬಸ್ಥರ ಮೂಲ ಅಜ್ಜ (ಮುತ್ತಜ್ಜ) ಪೂಜಾರಿ ಚೊಲ್ಲ. ಅವರ ಮಂಙ ಒಂದನೆ ಮಂಙ ಸುಬ್ಬು, ಎರಡನೆ ಮಂಙ ಅಪ್ಪಯ್ಯ, ಮೂರನೇ ಮಂಙ ಕಾಳಪ್ಪ, ಇವರಲ್ಲಿ ಹಿರಿಯ ಮಂಙ ಸುಬ್ಬು ಅವು ಸುಳ್ಯಕಾಟ್‌ಕಾಯಿಲಿ ಎದ್ದಂತ ದಂಗೆ ಅಡಗಿಸಿಕೆ ಹೋದವು ಮತ್ತೇ ಬಾತ್‌ಲೆ, ಆದ್‌ರ್‌ಂದ ಅವರ ಹೆಸರಲಿ ಉಂಬುಳಿ, ಭೂಮಿ ಜಾಗ ನಮ್ಮ ಕುಟುಂಬಕ್ಕೆ ಸಿಕ್ಕುಟ್ಟು (ನಿರೂಪದ ಆಧಾರ) ಹಂಗೆನೆ ಜಮ್ಮದ ಒಡಿಕತ್ತಿ ಸಹಃ. ಆದರೆ ಕುಟುಂಬಸ್ಥರು ಯಾರೊ ಒಬ್ಬರು ಆ ಒಡಿಕತಿನ ಕಾಣದಂಗೆ ಮಾಡಿಯೊಳೊ. ಇದಕ್ಕೆ ಕಾರಣ ಆ ಮಾಯೊಗೆ ಮಾತ್ರ ಗೊತ್ತುತ್ತೇಳಿ ಸುಮ್ಮನಾಗೊಳೊ.

ನಮ್ಮ ಕುಟುಂಬದ ಬಗ್ಗೆ ಒಂದ್ ಹೆಮ್ಮೆ ಪಡುವಂತ ವಿಷಯತ್ತೇಳಿರೆ ಅಂದ್ ನಮ್ಮ ಮುತ್ತಾತ ಬಂದದ್ ಒಬ್ಬ ಮಾತ್ರ. ಇಂದ್ ಅವರ ಉತ್ತರಾಧಿಕಾರಿಯಾಗಿ ವೆಂಕಟರಮಣ ಸ್ವಾಮಿ ಅನುಗ್ರಹದಿಂದ ಸುಮಾರು ಮುನ್ನೂರಕ್ಕೂ ಹೆಚ್ಚು ಒಳೊ. ಅದು ಅಲ್ಲದೆ ಸರ್ಕಾರದ ಅಂದರೆ ಭಾರತ ಸರ್ಕಾರದ, ಕರ್ನಾಟಕ ಸರ್ಕಾರದ ಬಹಳಷ್ಟು ಇಲಾಖೆಗಳಲ್ಲಿ ಅಂದರೆ ಶೇ 90 ರಷ್ಟು ಇಲಾಖೆಯಲ್ಲಿ ಒಂದಲ್ಲೊಂದು ಉದ್ಯೋಗ ಮಾಡುತಾ ಸರ್ಕಾರದ ಸಂಬಳ ಪಡೆಯುತೊಳೊ. ಹಂಗೆನೆ ಹಿಂದೆ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿ ಸಿಪಾಯಿದಂಗೆಲಿ ಭಾಗವಹಿಸಿ ಹೆಸರಾದ ಚೊಲ್ಲನವರ ಒಂದನೆ ಮಂಙ ಸುಬ್ಬುಗೆ ಉಂಬಳಿ ಜಮ್ಮ ಜಾಗ ಕೊಟ್ಟೊಳೊ. ಇನ್ನೊಬ್ಬ ನಮ್ಮ ಕುಟುಂಬದ ಸದಸ್ಯ ಗಾಂಧೀವಾದಿ ದಿವಂಗತ ಪೂಜಾರೀರ ರಾಮಪ್ಪನವರು ಮಡಿಕೇರಿ ಕೋಟೆಲಿ ಇದ್ದ ಬ್ರಿಟಿಷರ ಬಾವುಟನ ಕಿತ್ ನಮ್ಮ ರಾಷ್ಟ್ರಧ್ವಜ

ಹಾರಿಸಿ ಗಡಿಯಾರಕಂಬಂದ ಕೆಳಗೆ ಹಾರಿ ಕೋಟೆಬತ್ತರಿ ಹಾರಿ ಬ್ರಿಟಿಷರ ಕೈಯಿಂದ ತಪ್ಪಿಸಿಕೊಂಡ್ ಹೋಕಾಕನ ಗೋಣಿಕೊಪ್ಪದ ಹತ್ತಿರ ಪೋಲಿಸ್‌ನವು ಹಿಡ್ದ್ ಎರೆಸ್ಟ್ ಮಾಡಿ ಜೈಲಿ ಸೇರಿದ್ರ್. ಮತ್ತೆ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದ ಮೇಲೆ ಅವು ಅವಿವಾಹಿತರಾದ ಕಾರಣ ಸರಕಾರಂದ ಯಾವುದೆ ಸಹಾಯ ಪಡ್‌ಕಂಡ್‌ತ್‌ಲೆ. ಸಹಾಯ ಪಡ್‌ಕಣದಿದ್ದರು ಪರವಾಗಿಲ್ಲೆ ಅವರ್ನ ಹಿರಿಯ ಸ್ವಾತಂತ್ರ್ಯ ಹೋರಾಟಗಾರತ್ತೇಳಿ ಮಡಿಕೇರಿಯ ಯಾವು ದಾದರೊಂದು ರಸ್ತೆಯಲ್ಲಿ ಅವರ ಪುತ್ತಳಿನ ಸ್ಥಾಪನೆ ಮಾಡಿದ್ದರೆ ಅಥವಾ ಮಡಿಕೇರಿ ಪೇಟೆಲಿ ಯಾವುದಾದರೊಂದು ಸಾರ್ವಜನಿಕ ರಸ್ತೆಗೆ ಅವರ ಹೆಸರ್ ಹಾಕಿದ್ದರೆ ನಮ್ಮ ಘನ ಸರಕಾರದವು ಅವುಕೆ ಒಂದು ಗೌರವ ಕೊಟ್ಟಂತಾಗುತ್ತಿತ್. ಈ ಬಗ್ಗೆ ಅರೆಭಾಷೆ ಅಕಾಡೆಮಿಯವು ಒಂದು ಸೂಕ್ತ ಪ್ರಸ್ತಾಪನೆ ಮಾಡಿ ಅವುಕೆ ಒಂದು ಗೌರವ ಕೊಡುವಂತಾಗಲಿತ್ತೇಳಿ ನನ್ನ ಕೋರಿಕೆ.

* * * * *

# ಪುಣ್ಯಕ್ಷೇತ್ರಗ ಹರಿಯುವ ಹೊಳೆಗ

• ನಮ್ಮ ಭಾರತಲಿ ಅದೆಷ್ಟೊ ಪುಣ್ಯ ಕ್ಷೇತ್ರಗ ಒಳೊ. ಹಂಗೆನೆ ಪುಣ್ಯ ಹೊಳೆಗಳು ಸಹ ಒಳೊ. ಈ ಪುಣ್ಯ ಹೊಳೆಗಳಲ್ಲಿ ಮೀಯ್ದ್ ಪುಣ್ಯಕ್ಷೇತ್ರಗಳಲ್ಲಿ ಇರುವಂತ ದೇವಾಧಿ ದೇವತೆಗಳ ದೇವಸ್ಥಾನದ ಪೂಜೆ ಪುರಸ್ಕಾರ ಮಾಡಿಸಿ ಬಂದರೆ ಅವು ಮಾಡ್ಡಂತ ಸಕಲ ಪಾಪ ನಾಶ ಆಗಿ ಹೋದೇತ್ತೇಳ್ದು ಪ್ರತಿಯೊಬ್ಬ ಮನುಷ್ಯರಲ್ಲಿ ಇರುವಂತ ನಂಬಿಕೆ. ಇದ್ ಸಾಮಾನ್ಯವಾಗಿ ಪ್ರತಿಯೊಂದು ವರ್ಗದಲ್ಲಿ ಕಂಡು ಬರುತುಟ್ಟು. ಆದ್‌ರ್‌ಂದ ಅನಾಧಿ ಕಾಲಂದ ತೀರ್ಥಯಾತ್ರೆ ಮಾಡೊಕು. ಹಂಗೆನೆ ತೀರ್ಥಯಾತ್ರೆ ಮಾಡಿ ಪುಣ್ಯ ನೀರ್‌ಲಿ ಮೀದ್ ಪಾಪ ಪರಿಹಾರ ಮಾಡಿಕಂಡಂತ ಉದಾಹರಣೆ ಗಳ್ನ ನಮ್ಮ ಪುರಾಣಗಳಲ್ಲಿ ಬರ್‌ದದ್ ಸಹ ಕಂಡ್ ಬಂದದೆ. ಈಗ ವಿಷಯಕ್ಕೆ ಬರೋನೊ ತಿಳಿಯದೆ ಗೊತ್ತಿಲ್ಲದೆ ಅಕಸ್ಮತ್ತಾಗಿ ಯಾವುದೇ ಒಂದು ಸಣ್ಣ ಪಾಪ ಮಾಡ್ರೆ ಅದ್ ಪರಿಹಾರ ಆದುತ್ತೇಳಿ ಬಾವಿಸಿಕೊಣನೊ. ಅದ್ ಋಷಿ ಮುನಿಗ ಹೇಳ್ದ

ಸಹ ಸರಿತ್ತೇಳಿ ಒಪ್ಪಿಕೊಳೊನೊ.

ಆದರೆ ಉದ್ದೇಶ ಪೂರ್ವಕವಾಗಿ ಹಠ ಸಾಧಿಸಿಕ್ಕಾಗಿ ಆಸ್ತಿ ಪಾಸ್ತಿಗಾಗಿ (ಪಾಂಡವು ಕೌರವರಂಗೆ) ಮತ್ತೆ ಹೆಣ್ಣ್ ಮಕ್ಕಳ್‌ನ ಅಪಹರಿಸಿ ತಂದ್ ಅವರ್ನ ಹೀನ ಸ್ಥಿತಿಗೆ ತಂದ ಭೀಷ್ಮ ವೇದಶಾಸ್ತ್ರ ತಿಳಿದ ಗುರುಗಳಿಂದಾಗಲಿ ಹಂಗೆನೆ ವಸಿಷ್ಟ ಋಷಿಗಳಂಗೆ ದ್ರೋಣಾಚರ್ಯಗಳಂಗೆ ಮುಂದೆ ಆಗುವಂತ ಅನಾಹುತಗಳ್ನ ತಿಳ್ದ್ ಪಾಪ ಮಾಡಿ ಗಂಗೆ ಸ್ನಾನ ಮಾಡಿರೆ , ಪೂಜೆ ಪುರಸ್ಕಾರ ಮಾಡಿರೆ ಪಾಪ ಪರಿಹಾರ ಆದುತ್ತಾದರೆ ಈ ಜನ ಪಾಪ ಮಾಡಿಕೆ ಹಿಂಜರಿಯುದುಲೆ. ಇದ್ ಒಂದ್ ಗಾದೆ ಮಾತ್ ಮಾತ್ರ. ಕೊಂದ ಪಾಪ ಮಿಂದ್ ಪರಿಹಾರ ಆದುತಾದರೆ ಕೊಲ್ಲಿಕೇನ್ ಭಯತ್ತೇಳುವ ಗಾದೆ. ಇದ್ ಈ ಕೆಟ್ಟ ಮನುಷ್ಯರ ದುಷ್ಟತನದ ಹೇಳಿಕೆ ಮಾತ್ರ.

## ಹರಿಯುವ ಹೊಳೆಗ

ಆದಿಶಕ್ತಿ ಮತ್ತೆ ಶ್ರೀ ಕೃಷ್ಣ ಪರಮಾತ್ಮ ಶ್ರೀ ಮನ್ನಾರಾಯಣ ಈ ಪ್ರಕೃತಿನ ಸೃಷ್ಟಿ ಮಾಡ್‌ಕಾಕನ ಈ ಪ್ರಕೃತಿಯಲ್ಲಿರುವಂತಹ ಎಲ್ಲಾ ಜೀವ ರಾಶಿಗ ಬದುಕಿ ಉಳಿಯಕುತ್ತಾದರೆ ಅದಕ್ಕೆ ಗಾಳಿ ನೀರ್ ಆಹಾರ ಬೇಕು. ಮತ್ತೆ ಬೆಳಕ್, ಹಂಗೆನೆ ಶಾಖ ಬೇಕುತ್ತೇಳ್ದನ್ನ ಆಧಾರ ಬಿಂದು ಆಗಿಟ್ಟುಟ್ಟು. ಅವುಕೆ ಆ ಸೃಷ್ಟಿಕರ್ತರ್ ಹೆಸರ್ ಕೊಟ್ಟತ್‌ಲೆ ಕಾರಣ ಅಂದ್ ಅವುಕೆ ಆ ಸೃಷ್ಟಿಕರ್ತ ಒಂದು ಹೆಸರ್ ಕೊಟ್ಟಿದ್ದರೆ ಈ ಭೂಮಿಲಿ ಎಲ್ಲಾ ಕಡೆ ಒಂದ್ ಹೆಸರ್ ಇರ್‌ತ್ತಿತ್ತ್. ಆದ್‌ರ್‌ಂದ ಪ್ರಕೃತಿ ಬೆಳ್ದಂಗೆ ಜನ ಅವಿದ್ಯಾವಂತರಿಂದ, ವಿದ್ಯಾ ವಂತರಾಕಕನ ಅಂದರೆ ಬುದ್ಧಿ ಜೀವಿಗಳಾದ ಮನುಷ್ಯ ವರ್ಗದವು ಮಾತಾಡಿಕೆ ಕಲ್ತ ಮೇಲೆ ಒಂದೊಂದು ಜೀವಿಗಳ್ನ ಗುರುತಿಸಕ್ಕಾಗಿ

ಅವರದೆ ಆದ ಭಾಷೆಲಿ ಒಂದೊಂದು ಹೆಸರ್‌ಗಳ್ನ ಇಟ್ಟ್‌ಕಂಡ್ ವಿದ್ಯಾವಂತರಾಕಕನ ಬರವಣಿಗೆ ಮೂಲಕ ಹೆಸರ್‌ಗಳ ಇಟ್‌ಕಂಡ್ ಬಂದದೆ ಹೊರತ್ತಾಗಿ ಯಾವುದೇ ನದಿಗಳಲ್ಲಿ (ಹೊಳೆ) ಯಾವ ದೇವತೆಗಳು ಹುಟ್ಟಿತ್‌ಲೆ. ಅವು ನದಿಯಾಗಿ ಹುಟ್ಟಿ ಹರ್ದತ್‌ಲೆ. ಬದಲಾಗಿ ಭಕ್ತ ಮುನಿಗಳ ಎದುರಿಗೆ ಕಾಣಿಸಿಕಂಡ್ ಅಲ್ಲಿಂದ ಅವು ಮಾಯವಾಗಿ ಹೋಕಾಕನ ಆ ಋಷಿಮುನಿಗಳ ಕಣ್ಣಿಗೆ ಕಂಡ್‌ದು, ಅವು ಆ ನೀರ್‌ಲಿ ಮುಳುಗಿ ಮಾಯವಾಗಿ ಹೋದೊ ತ್ತೇಳುವಂತ ಭಾವನೆ. ಅದಕ್ಕಾಗಿ ಅಂತಾ ಋಷಿ ಮುನಿಗ ಆ ಹೊಳೆಗಳಿಗೆ ಆ ದೇವತೆಗಳ ಹೆಸರ್ನ ಇಟ್ಟ್ ಲೋಕ ಕೀರ್ತಿಯಾಗು ವಂಗೆ ಅಂದ್‌ನ ಅವರದ್ದೆ ಆದ ಭಾಷೆಲಿ ಅವು ಬರ್‌ದೊಳೊ. ಹಂಗೆನೆ ದೇವರುಗಳಿಗೆ ಸಹ ಋಷಿಮುನಿಗ ಹಾಕಿಕಂಡಂತಾ ಹೆಸರೇ ಹೊರತ್ ಮನುಷ್ಯರಂಗೆ ಹೆತ್ತ ಹೊತ್ತ್ ತೊಟ್ಟ್‌ಲ್‌ಗೆ ಹಾಕಿ ಹೆಸರ್ ಹಾಕಿದಲ್ಲ.

ಈ ದೇವಾನುದೇವತೆಗಳೆಲ್ಲಾ ಶಕ್ತಿಗಳಿಂದ ಸೃಷ್ಟಿ ಮಾಡಿ ಕಂಡತಾ ಶಕ್ತಿ ದೇವರುಗ. ಅಂದರೆ ಈ ದೇವತೆಗಳೆಲ್ಲಾ ಪ್ರಕೃತಿ ರಕ್ಷಣೆಗಾಗಿ ಸೃಷ್ಟಿ ಮಾಡಿಕಂಡದ್. ಇವು ನಮ್ಮನ್ನೆಲ್ಲಾ ಸದಾ ರಕ್ಷಣೆ ಮಾಡ್‌ತ್ತಿರ್‌ಕಾಕನ ಬುದ್ಧಿ ಜೀವಿಗಳಾದ ಮನುಷ್ಯರ್ ಅವರವರ ನಂಬುಕೆಯ ದೇವರ್ನ್ ನೂರಾರ್ ಅಥವಾ ಸಾವಿರಾರ್ ಹೆಸರ್‌ಗಳಲ್ಲಿ ಕರ್‌ಕಂಡ್ ಅವುಕ್ಕೆ ನೈವೇದ್ಯ ಮಾಡಿ ಅವರ ರೂಪುಗಳಿಗೆ ಅಲಂಕಾರ ಮಾಡಿ ದೀಪ ಹೊತ್ತಿಸಿ ಮಂಗಳಾರತಿ ಮಾಡ್ದೆ ಪೂಜೆ. ಇದ್‌ನ ಯಾರ್ ಬೇಕಾದರ್ ಏಕಾಗ್ರತೆಯಿಂದ ಒಂದು ನಿರ್ದಿಷ್ಟ ಜಾಗಲಿ ಅವರವರ ಮನೆಲೆ ಮಾಡಿಕಣಕ್. ಆದರೆ ಇದಕ್ಕೆ ಶುದ್ಧ ಮುದ್ರಿಕೆ ಮೂಲ. ಅದ್‌ಕ್ಕಾಗಿ ಒಂದು ನಿಗಧಿತ – ಅಂದರೆ ಗೊತ್ತು ಪಡಿಸಿದ ಸ್ಥಳಲಿ ಜಾಗಲಿ ದೇವಸ್ಥಾನತ್ತೇಳ್ದನ್ನ ಆ ದೇವರಿಗೆ ಒಂದು ಗುಡಿನ ಕಟ್ಟಿಸಿ ಆ ದೇವಸ್ಥಾನಕ್ಕೆ ಸಂಬಂಧಿಸಿದಂಗೆ ಅಲ್ಲಿಗೆ ಅತೀ ಹತ್ರ ಇರುವ

ಕುಟುಂಬಸ್ಥರ್‌ನ ಒಬ್ಬ ತಕ್ಕ ಮುಖ್ಯಸ್ಥ ಮತ್ತೊಬ್ಬ ದೀಪ ಇಸುವ ಕುಟುಂಬಸ್ಥರ್‌ತ್ತೇಳಿ ಪುರಾತನ ರಾಜರ ಕಾಲಂದ ನಡ್ದ್ ಬಂದದ್. ಇದ್ ಅಂದ್ ಆ ದೇವಸ್ಥಾನದ ಹತ್ತಿರಲಿ ಇದ್ದವು ಖಡ್ಡಾಯವಾಗಿ ನಡ್‌ಕಂಡ್ ಬಂದರ್‌ಂದ ಆ ಕುಟುಂಬಸ್ಥರಿಗೆ ರಾಜ ವಂಶಸ್ಥರ್ ಕೊಟ್ಟಂತ ಉಡುಗೊರೆ ಗೌರವತ್ತೇಳಿರೆ ತಕ್ಕ ಮುಖ್ಯಸ್ಥ ಮತ್ತೆ ದೇವರ ಭಂಡಾರಗಳನ್ನು ಇಟ್‌ಕಂಬಕ್ಕೆ ಒಂದು ಕುಟುಂಬಸ್ಥರನ್ನ ಗೊತ್ತ್ ಪಡಿಸಿಕೊಂಡ್ ಆ ಕುಟುಂಬಸ್ಥರ್‌ನ ಭಂಡಾರ ತಕ್ಕತ್ತೇಳುವ ಉಡುಗೊರೆ ಹಂಗೆನೆ ದಿನನಿತ್ಯ ದೇವರ ಗುಡಿಗೆ ದೀಪ ಇಡುವಂತ ಕುಟುಂಬಸ್ಥರನ್ನ ಮುಕ್ಕಾಟಿ. (ಇದು ಅಂದ್‌ಂದ ಇಂದ್ ಮುಟ್ಟ ಉಟ್ಟು)

ಇಲ್ಲಿ ನೀವು ಕೇಳುವರಿ ದೇವಸ್ಥಾನಕ್ಕೆ ಬ್ರಾಹ್ಮಣ ದೀಪ ಇಡುದುಲೆತಾ, ಅನಾದಿ ಕಾಲಲಿ ಒಂದು ಕಾಡ್ ಮಧ್ಯಲಿ ಒಂದು ದೇವರ ಗುಡಿ ಕಟ್ಟಿ ಪೂಜಿಸುಕೆ ಸುರು ಮಾಡುವೆ. ಆ ಕಾಡ್ ಮಧ್ಯಲಿ ಒಬ್ಬ ಬ್ರಾಹ್ಮಣರ ಒಂದು ಸಂಸಾರ ಇರಿಕೆ ಆಕಿಲೆ (1) ಪ್ರಾಣಿ ಭಯ (2) ಕಳ್ಳಕಾಕರ ಭಯ (3) ಪೂಜೆಪುರಸ್ಕಾರಗ ಒಂದು ವರ್ಷಕ್ಕೆ ಒಂದು ಸಲ ಹಬ್ಬತ್ತೇಳಿ ಮಾಡುತ್ತಿದ್ದೊ ಈ ಒಂದು ವರ್ಷದ ಒಳಗಡೆ ಯಾವ ಜನ ಸಹ ಅಲ್ಲಿಗೆ ಹೋಗ್ತಿತ್ತ್‌ಲೆ. ಅಗತ್ಯ ವಸ್ತುಗಳಿಗೆ ಖಹಳಷ್ಟ್ ದೂರ ನಡ್‌ಕಂಡ್ ಒಬ್ಬೊಂಟಿಗನಾಗಿ ಹೋಗಿ ಬರಕ್ಕಿತ್. ಆಗ ಜನಸಂಖ್ಯೆ ಕಮ್ಮಿ ಅಲ್ಲಲ್ಲಿ ಗುಂಪು ಗುಂಪಾಗಿ ಮನೆ ಕಟ್ಟಿಕಂಡ್ ಜನ ವಾಸ ಮಾಡುತ್ತಿದ್ದೊ. ಅದ್‌ಕ್ಕಾಗಿ ದೇವರಿಗೆ ದಿನ ನಿತ್ಯ ದೀಪ ಇಡಿಕೆ ಒಂದು ಕುಟುಂಭಸ್ಥರಿಗೆ ಅಧಿಕಾರ ಕೊಟ್ ಅವರನ್ನ ಸಹ ಗೌರವ ಕುಟುಂಬಸ್ಥರ್‌ತ್ತೇಳಿ ಮಾಡಿಕಂಡಿದ್ದು, ಇದ್ ಅಂದ್ ಇದ್ದ ಪದ್ಧತಿ. ಅದೇ ಇಂದ್ ಮುಟ್ಟ ನಡ್‌ಕಂಡ್ ಬರ್‌ತುಟ್ಟು. ಆದರೆ ವಿದ್ಯಾವಂತರ್, ಬುದ್ಧಿವಂತರ್ ಆದ ಜನ ಸ್ವಲ್ಪ ಸ್ವಲ್ಪ ತಿದ್ದುಪಡಿ ಮಾಡಿಕಂಡ್ ಬರುತ್ತೊಳೊ ಹೊರತ್ ಬ್ಯಾರೆ ಯಾವ

ಬದಲಾವಣೆ ಇಲ್ಲೆ. ಇದ್ ವಂಶ ಪಾರಂಪರ್ಯವಾಗಿ ಮುಂದೆ ಬೆಳೆದುಕೊಂಡು ಹೋದೆ. ಯಾಕೆತ್ತೇಳಿರೆ ದೇವರುತ್ತೇಳ್ದು ಎಲ್ಲವರ್‌ದ್ ಆದರೆ ಆಚಾರ ವಿಚಾರ ನಡುಪು ಇದ್ ಪುರಾತನದ್ ಇದನ್ನ ಅನುಸರಿಸಿಕೊಂಡ ಹೋಗುವಂತ ಪೂರ್ತಿ ಹಕ್ಕ್ ಆ ಕುಟುಂಬ ಸ್ಥರದ್. ಇನ್ ಸ್ವಲ್ಪ ಮುಂದುವರಿಯಕಾಕನ ಕಾಡ್ ಮಧ್ಯ ಬಿಟ್ಟು ಹರಿವ ಹೊಳೆಕರೆಲಿ ದೇವಸ್ಥಾನಗಳ್ನ ಅಲ್ಲಲ್ಲಿ ವಾಸ ಮಾಡುತ್ತಿದ್ದ ಜನರ ಗುಂಪು ಸೇರಿಕಂಡ್ ಪೂಜೆ ಮಾಡಿಕೆ ಸುರು ಮಾಡುವೆ. ಅಲ್ಲಿ ಆ ಗುಂಪು ಅಥವಾ ಊರಿನವರದೆ ಒಂದು ಪದ್ಧತಿ ಅಥವಾ ನಡಪು. ಹೊಳೆ ಬದಿಲಿ ಯಾಕೆ ದೇವಸ್ಥಾನ ಕೇಳುವರಿ. ಕಾರಣ ಇಷ್ಟೆ ಪ್ರತಿಯೊಬ್ಬ ಶುದ್ಧ ಮುದ್ರಿಕೇಲಿ ಇರಕು ಮತ್ತೆ ಗುಡಿಲಿ ಇರುವ ದೇವರ್ನ ಪ್ರತಿದಿನ ತೊಳ್ದ್ ಅಲಂಕಾರ ಮಾಡಿ ಗಂದದ ಹೊಗೆ ಮತ್ತೆ ಮಂಗಳಾರತಿ ಮಾಡಕುತ್ತೇಳುವ ನಿಯಮ. ಅನಾದಿ ಕಾಲದಿಂದ ಬಂದದ್, ಅದ್‌ರಂದ್, ಹೊಳೆ ಹತ್ತಿರ ದೇವಸ್ಥಾನ ಕಟ್ಟಿರೆ, ದೇವರ ಜಳಕ, ಪೂಜೆಗೆ ನೀರ್, ಪೂಜಾ ಸಮಯಲಿ ಭಕ್ತರಿಗೆ ಸ್ನಾನ, ಕುಡಿಯಕೆ ನೀರ್, ನೀರ್‌ನ ಸೌಕರ್ಯದಿಂದ ಪ್ರಕೃತಿ ನಿಯಮದಿಂದ ಸದಾ ಬೆಳೆಯುವ ಪೂಜೆಗೆ ಬೇಕಾದ ಹೂ, ಗರಿಕೆ, ಮಾವಿನ ಸೊಪ್ಪು, ಹಲಸಿನ ಸೊಪ್ಪು, ನೇರಳೆ ಸೊಪ್ಪು, ಬಾಳೆ, ಬಾಳೆ ಎಲೆ, ತುಂಬೆ, ಅಡಿಕೆ, ವೀಳ್ಯದೆಲೆ, ತೆಂಗಿನಕಾಯಿ, ಹಿಂಗಾರ, ಮುತ್ತುಗದ ಎಲೆ, ಉತ್ರಣಿ ಗಿಡ, ದೀಪ ಇಸಿಕೆ ಹತ್ತಿ ನೂಲು ಗಿಡ, ದನಕ್ಕೆ ಮೇವು, ಹಾಲು, ತುಪ್ಪ, ಜೇನು, ಗೋಮಯ(ಸಗಣಿ), ರಂಗೋಲೆ ಬರೆಯಲಿಕೆ ಜೇಡಿಮಣ್ಣ್, ಹಿಂಗೆ ಹತ್ತರ್ ಪೂಜಾ ಸಾಮಾಗ್ರಿಗಳ ಗಿಡ ಮೂಲಿಕೆಗೆ ಬೆಳೆಯುತ್ತಿದ್ದದ್ ಸದಾ ನೀರ್‌ನ ಸೌಕರ್ಯ ಇರುವ ಹೊಳೆ ಬದಿಲಿ. ಅದ್‌ಕ್ಕಾಗಿ ಈ ಹೊಳೆಗಳಿಗೆ ದೇವತೆಗಳ ಹೆಸರ್ ಕೊಟ್ಟೊಳೊ. ಅದ್‌ರ್‌ಂದ ಈ ದೇವರು ಯಾರೊಬ್ಬನ ಸ್ವಂತ

ಅಲ್ಲ. ಈ ಹೊಳೆ ಯಾರೊಬ್ಬನ ಸ್ವಂತ ಅಲ್ಲ. ಈ ಗಾಳಿ, ಬೆಳಕ್, ಯಾರೊಬ್ಬನ ಸ್ವಂತ ಅಲ್ಲ, ಬಿಕ್ಷುಕನಿಂದ ಹಿಡ್ದ್ ಕೋಟ್ಯಾಧೀಶ್ವರನ ವರೆಗೆ ಎಲ್ಲಾ ರೀತಿಲಿ ಸಹ ಒಂದೆ ಅಳತೆ ಪ್ರಮಾಣಲಿ ಇದ್ ಅಂದ್ ಇದ್ದದ್, ಇಂದ್ ಉಟ್ಟು, ಇನ್ ಮುಂದಕ್ಕೂ ಉಟ್ಟೇಉಟ್ಟ್, ಅದ್‌ರ್‌ಂದ ಈ ಪ್ರಪಂಚಲಿ ಯಾರಿಗೆ ಯಾರ್ ದೊಡ್ಡವು ಅಲ್ಲ. ನಾವೆಲ್ಲ ಅಂದೂ ಒಂದೆ, ಇಂದೂ ಒಂದೆ ಇನ್ನು ಮುಂದಕ್ಕೂ ಒಂದೆ ಬೆಳೆಯುವ ರೀತಿ ನಡತೆ ಬ್ಯಾರೆ ಬ್ಯಾರೆ. ಇದೆ ವಿನಾಸದ ಕಾಲ. ಅಂದರೆ ಪ್ರಕೃತಿ ನಾಶ, ಇದೇ ದೇವರುತ್ತೇಳುವ ಶಕ್ತಿಯ ಮಹಿಮೆ.

* * * * *

# ಕುಂಕುಮ ಭಾಗ್ಯ

ಕುಪ್ಪಿಬಳೆ, ವಾಲೆ ಭಾಗ್ಯ, ಮೂಗಿಗೆ ಮೂಗುತ್ತಿ (ಮೂಗ್‌ಬೊಟ್ಟು) ಇದ್ ಒಂದು ಹೆಣ್ಣ್‌ನ ಮೂಲಹಕ್ಕ್‌ದಾರಿಕೆ. ಅಂದರೆ ಹೆಣ್ಣ್ ಹುಟ್ಟಿಬೆಳೆಯಕಾಕನ ಹಾಕಂಬ ಮೂಲ ಅಲಂಕಾರದ ಉಡುಗೆ ತೊಡಿಗೆಗಳಲ್ಲಿ ಒಂದು. ಹಂಗೆ ಹೆಣ್ಣ್ ಹಾಕಿಕೊಂಬಂತ ಬಟ್ಟೆ ಬರೆಗೆಲ್ಲ. ಇದ್ ಹೆಣ್ಣ್‌ನ ಅಪ್ಪಅವ್ವನ ಉಡುಗೊರೆ. ಒಂದ್‌ಹೆಣ್ಣ್ ಜೀವಂತವಾಗಿ ಇರುವವರೆಗೂ ಹಾಕಿಕಂಬಂತ ಉಡಿಗೆತೊಡಿಗೆ ಇದ್ ಹೆಣ್ಣ್‌ನ ಅಲಂಕಾರಕ್ಕಾಗಿ, ಇದ್ ಒಂದು ಹೆಣ್ಣ್‌ನ ಜನ್ಮಸಿದ್ಧ ಹಕ್ಕ್. ಇದನ್ನ ಯಾವ ನೀತಿನಿಯಮ ಕಾನೂನ್‌ನಲ್ಲಿ ತರುವಂತ ವಿಷಯವೇ ಅಲ್ಲ. ಆದರೆ ಈ ಗಂಡಸರಸಮಾಜದೊಟ್ಟಿಗೆ ಒಂದು ಹೆಣ್ಣ್‌ನಬ್ಯಾನೆನ ಅಥವಾ ನೋವುನ ಅರ್ಥಮಾಡಿಕೊಂಬಕಾಗದಂತ ಹೆಣ್ಣ್‌ವರ್ಗದವು ಸೇರಿಕಂಡ್ ಮಾಡಿಕಂಡಂತ ಒಂದ್ ಕಟ್ಟ್‌ಪಾಡ್. ಇದಕ್ಕೆ ಗಂಡ್‌ಗಿಂತ ಹೆಣ್ಣ್ ಹೆಚ್ಚಿನ ಕಾರಣತ್ತೇಕ್ರೆ ಸಹತಪ್ಪಾಕಿಲೆ. ಈ ಅಚಾರಂದ ಹೆಣ್ಣ್‌ನ ಕುರೂಪಿ ಮಾಡಿ ಅವಳು ಯಾರ ಕಣ್ಣಿಗೂ ರೂಪವತಿಯಾಗಿ ಕಾಂಬಕಾಗದ್, ಕುರೂಪಿಯಾಗಿದ್ದರೆ

ಅವರ್ನ ಬ್ಯಾರೆ ಗಂಡಸರ್ ಮುಖಎತ್ತಿ ನೋಡುದುಲೆತ್ತೇಳುವಂತ ಹಿಂದಿನ ಕಾಲಂದ ನಡ್ದ್‌ಬಂದಂತ ಒಂದು ಮೂಢನಂಭಿಕೆ. ಇದ್ ಅಂದ್‌ಂದ ಇಂದ್ ಮುಟ್ಟ ನಡ್ಕಂಡ್ ಬರ್‌ತುಟ್ಟು. ಆದರೆ ಇನ್ನ್ ಮುಂದೆ ಕಾಲ ಕಾಲಕ್ಕೆ ಹಂತಹಂತವಾಗಿ ಕೈಬುಡಿಕೆ ದೊಡ್ಡ ಮಟ್ಟದವರ್‌ಂದ ಸುರ್‌ಮಾಡಿರೆ ಎಲ್ಲಾ ಹೆಣ್ಣ್‌ಮಕ್ಕಳ ಜೀವನಕ್ಕೆ ದಾರಿ ದೀಪ ಆದೆ. ಇದನ್ನ ಪೂರ್ತಿಯಾಗಿ ಕೈಬಿಟ್ಟ್ ನಮ್ಮ ಹಿಂದೂ ಶಾಸ್ತ್ರ ಕಟ್ಟುಪಾಡ್‌ಗಳಲ್ಲಿ ಪ್ರತಿಯೊಬ್ಬ ಹೆಣ್ಣಿಗೆ ಸಮಾನಹಕ್ಕ್ ಇದ್ದ್‌ಇರೋಕು. ಯಾವುದೇ ಸಮಾರಂಭಗಳಲ್ಲಿ ಪೂಜೆಪುರಸ್ಕಾರಗಳಲ್ಲಿ ಅವರ್ನ ಅಲಾದಿಯಾಗಿ ಕಾಂಬಕಾಗದ್ ಹಂಗೆನೆ ಅಂತವರ್ನ ಬ್ಯಾರೆಪಂಗಡಕ್ಕೆ ಸೇರಿಸಿಕಾಗದ್‌ತ್ತೇಳಿ ಎಲ್ಲಾ ಹೆಣ್ಣ್ ವರ್ಗದವು ಸೇರಿಕಂಡ್ ಸಭೆ ಸಮಾರಂಭಗಳ್ನ ಮಾಡಿ ಈ ಕೆಟ್ಟ ಪದ್ಧತಿನ ಹೋಗಲಾಡಿಸಕು. ಅಂದರೆ ಮಾತ್ರ ಇಲ್ಲಿ ಹೆಣ್ಣಿಗೆಗಂಡಿಗೆ ಸರಿ ಸಮಾನಹಕ್ಕು ಉಟ್ಟುತ್ತೇಳಿ ಬಾಳಿಬದ್‌ಕಕ್ ತ್ತೇಳುವ ನನ್ನ ಅಭಿಪ್ರಾಯನ ಬರ್‌ದೊಳೆ. ಇದನ್ನ ಓದುಬಾಂಧವರು ಓದಿ, ತಮ್ಮತಮ್ಮ ಅಭಿಪ್ರಾಯಗಳ್ನ ಚರ್ಚೆಮಾಡಿ, ನಮ್ಮಅಕಾಡೆಮಿ ಮೂಲಕ ಬಗೆ ಹರಿಸಿಕಂಬಂತ ಕಾರ್ಯಕ್ರಮಗಳ್ನಮಾಡಿಕೆ ಆ ಮಹಾವಿಷ್ಣು, ಲಕ್ಷ್ಮೀದೇವಿ ಆದ ನಮ್ಮ ಕುಲದೇವರಾದ ವೆಂಕಟರಮಣಸ್ವಾಮಿ, ಮಾತೆಲಕ್ಷ್ಮೀದೇವರು ಅನುಗ್ರಹ ನೀಡಲಿತ್ತೇಳಿ ನನ್ನ ಈ ಸುರುನ ಪುಸ್ತಕದ ಬರವಣಿಗೆನ ಇಲ್ಲಿಗೆ ಮುಗ್‌ಸ್‌ತೊಳೆ. ಮತ್ತೆ ಹಿರಿಯ ಭಾಂದವರ ಆಶೀರ್ವಾದ ಬೇಡುತ್ತೊಳೆ.

********



ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು
ಸಾಹಿತ್ಯ ಅಕಾಡೆಮಿ



## ಪೂಜಾರಿರ ಜಿ. ಮಾದಪ್ಪ

ಇವು 26-2-1941ರಂದ್ ಪೂಜಾರಿರ ಗಣಪತಿ ಮುದ್ದವ್ವ ದಂಪತಿಯವರ ಒಂದನೆ ಮಂಙನಾಗಿ ಅರ್ವತ್ತೋಕ್ಲು ಗ್ರಾಮದ ಪೂಜಾರಿರ ಐನ್‌ಮನೆಲಿ ಜನಿಸಿದ್ದ್ ತುಂಬು ಕುಟುಂಬದಲ್ಲಿ ಬಾಲ್ಯ ಕಳ್ದ್ ಇವು ಮನೆಂದ 10 ಕಿ.ಮೀ ದೂರದ ಮಡಿಕೇರಿ ಹೈಯರ್ ಸೆಕೆಂಡರಿ ಸ್ಕೂಲಲ್ಲಿ ಸೆವೆಂತ್‌ಫಾರಂವರೆಗೆ ವ್ಯಾಸಂಗ ಮಾಡಿ ಸರ್ಕಾರಿ ಚಾಕ್ರಿಗೆ ಸೇರಿ ಮುಂಬಡ್ತಿ ಪಡ್ದ್ ಪತ್ರಾಂಕಿತ ಅಧಿಕಾರಿಯಾಗಿ ರಾಜ್ಯದ ಬ್ಯಾರಬ್ಯಾರೆ ಜಿಲ್ಲೆಗಳಲ್ಲಿ ಸೇವೆಸಲ್ಲಿಸಿ ಈಗ ನಿವೃತ್ತರಾಗಿ ಪೂಜಾರಿರ ಐನ್‌ಮನೆಲಿ ನಿವೃತ್ತ ಜೀವನ ನಡ್ಸೆತ್ತೋಳೊ. ಇವರ ಧರ್ಮಪತ್ನಿ ಸರೋಜಿನಿ (ತವರ್‌ಮನೆ ತೋಟಂಬೈಲ್) ಇವ್ ಕೂಡ ನಿವೃತ್ತ ಮುಖ್ಯ ಶಿಕ್ಷಕಿ. ಇವುಕೆ ಮೂರ್ ಜನ ಮಕ್ಕ. ನಂದಕುಮಾರ, ಪ್ರದೀಪ್‌ಕುಮಾರ, ವೇದ ಕುಮಾರಿ (ಪಾಕಮುಕ್ಕಾಟಿ ದಯಾನಂದ ನವರ ಧರ್ಮಪತ್ನಿ) ಈಗ ಮಾದಪ್ಪನವು ಅರ್ವತ್ತೋಕ್ಲು ಗ್ರಾಮದ ಶ್ರೀ ಮಹಾವಿಷ್ಣು ದೇವಸ್ಥಾನದ ಆಡಳಿತಮಂಡಳಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸ್ತೊಳು.

"ಕುಂಕುಮ" ಇವು ಬರ್‌ದ ಸುರುನ ಕೃತಿ.

Ptd @ Sri Krishna Computers & Printers. Mdk. Mob : 94481 35592